ಭರತೇಶವೈಭವ

# ಶೋಭನಸಂಧಿಗಳು



ಸಂಪಾದಕ

ಮಿರ್ಜಿ ಅಣ್ಣಾರಾಯ



ಸಾಹಿತ್ಯ ಭಾಂಡಾರ

[illegible]

ಶಾಂತಿ ಸೇವಾ ಸದನ, ಸೇಡಬಾಳ

ಸಂಪಾದಕರು :

ಟಿ. ಕೆ. ಪಾಟೀಲ,
ಬಿ. ಎ., ಬಿ. ಟಿ.

ಮಿರ್ಜಿ ಅಣ್ಣಾರಾಯರು

ಕ್ರಯ : ೧—೦—೦

ಮುದ್ರಕರು :
ಶ್ರೀ. ಎನ್. ಎಸ್. ಬೆಂಗೇರಿ
ವಿಜಯ ಮುದ್ರಾಲಯ
ಧಾರವಾಡ.

ಪ್ರಕಾಶಕರು :
ಶ್ರೀ. ಮಿರ್ಜಿ ಅಣ್ಣಾರಾಯರು
ಶಾಂತಿ ಸೇವಾ ಸದನ
ಸೇಡಬಾಳ.

# ಕೃತಜ್ಞತೆ



ಇದು ನಮ್ಮ 'ಶಾಂತಿಸೇವಾಸದನ'ದ ಎಂಟನೆಯ ಪ್ರಕಟನೆಯು. ಗ್ರಂಥ ಪ್ರಕಾಶನ ಕೆಲಸವೊಂದು ಪವಿತ್ರ ಕಾರ್ಯವೆಂದು ನಂಬಿ ನಾವು ಮುಂದೆ ಸಾಗಿದ್ದೇವೆ. ಅಂತಲೇ ಇಂಥ ತುಟ್ಟಿಯ ದಿನಗಳಲ್ಲೂ ಕೂಡ ಡೇಮಿ ೧/೮ ಆಕಾರದ ಸಾವಿರ ಪುಟಕ್ಕೂ ಮಿಕ್ಕಿದ 'ಜೈನಧರ್ಮ' ಎಂಬ ಗ್ರಂಥವೊಂದನ್ನು ನಮ್ಮ ಸದನದ ಪ್ರಕಾಶನವೆಂದು ಸ್ವೀಕರಿಸಿದ್ದೇವೆ. ನಾಡಿನ ಹಲವು ಕಡೆಗಳಿಂದ ನಮ್ಮ ಸದನದ ಉದ್ಧಾರಕ್ಕಾಗಿ, ಸದಸ್ಯರಾಗಿ ಜನರು ನೆರವಾಗಿದ್ದಾರೆ, ನೆರವಾಗುವ ಭರವಸೆಯನ್ನು ಇತ್ತಿದ್ದಾರೆ. ಆ ಭರವಸೆಯು ನಮ್ಮ ಬೆಳವಣಿಗೆಗೆ ಪೋಷಕವಾಗಿದೆ. ಅದಕ್ಕೆ ಪ್ರತ್ಯಕ್ಷ ಉದಾಹರಣೆಯೆಂದರೆ ನಮ್ಮ ಈ 'ಶೋಭನಸಂಧಿ'ಗಳ ಪ್ರಕಾಶನವು.

ಉಗಾರ ಊರಿನ ಗೌಡರಾದ ಶ್ರೀ. ಪಾಸಗೌಡ ಅಪ್ಪಾಗೌಡ ಪಾಟೀಲ ರಂತೂ ತುಂಬ ಒಳ್ಳೆಯ ಗೌಡರು. ಅವರ ಮನೆಯೆಂದರೆ ಜೈನ ಸಂಸ್ಕೃತಿಯ ಕೇಂದ್ರವಿದ್ದಂತೆ. ಮನೆಯಲ್ಲಿ ಶ್ರೀ ಪದ್ಮಾವತಿದೇವಿ, ಮನೆಯ ಸೊಸೆಯ ಭಕ್ತಿಗೆ ಬೆನ್ನುಹತ್ತಿ ಬಂದು ನೆಲಸಿದವಳು; ಮುಂದೆ ಗೌಡರಮನೆ ದೇವತೆ ಗ್ರಾಮದೇವತೆಯಾದಳು. ಈಗ ಹೊಂಬುಜದ ಶ್ರೀ ಪದ್ಮಾವತಿ ದೇವಿ ಯಂತೆ ನಾಡಿನ ದೇವಿಯೂ ಆಗಿದ್ದಾಳೆ. ಅಂಥ ದೇವಿಯ ಕೃಪಾಛತ್ರ ಗೌಡರ ಮನೆತನಕ್ಕೆ—ಅವಳ ಪ್ರೇರಣೆಯಿಂದಲೇ ನಾಡಿನಲ್ಲಿ ಎಲ್ಲೂ ನಡೆ ಯದಷ್ಟು ಉತ್ಸಾಹದಿಂದ ನಾಡಹಬ್ಬ— ಮಹಾನವಮಿಯ ನದಿಯೊಳಗಿನ-ದೇವಿಯ ಪೂಜೆ—ವೈಭವದಿಂದ ನಡೆಯುತ್ತಿದೆ. ಆಗ ನಾಡಿನ ವಿವಿಧ ಭಾಗಗಳಿಂದ ಇಲ್ಲಿ ಜನ ಸೇರುತ್ತದೆ. ಇಂಥ ಸಾಂಸ್ಕೃತಿಕ ಚಟುವಟಿಕೆಗಳು ಪೂರ್ವಕಾಲದಿಂದಲೂ ಈ 'ಗೌಡ' ಮನೆತನದ ಆಶ್ರಯದಲ್ಲಿ ನಡೆಯುತ್ತ ಬಂದಿವೆ. ಅದರಿಂದಲೇ ಅವರ ಮನೆಯಲ್ಲಿ ಹಳೆಯ ಅನೇಕ ಗ್ರಂಥಗಳು ಇನ್ನೂ ಸಿಕ್ಕುತ್ತಿವೆ. ನಮ್ಮ ಸದನದ ಮೊದಲ ಪ್ರಕಾಶನವಾದ 'ಚಿನ್ಮಯ

ಚಿಂತಾಮಣಿ'ಯೂ ಇದೇ ಗೌಡರ ಮನೆಯಲ್ಲಿ ದೊರೆತುದು. 'ಶೋಭನೆ ಸಂಧಿಗಳು' ಕೂಡ ಸಿಕ್ಕುದು ಇಲ್ಲಿಯೇ. ಇವುಗಳ ಪ್ರಕಾಶನಕ್ಕೆ ಉದಾರ ಮನಸ್ಸಿನಿಂದ ಧನ ಸಹಾಯ ಮಾಡಿ ಶ್ರೀ ಭುಜಗೌಡ ಪಾಸಗೌಡ ಪಾಟೀಲರು ನಮ್ಮನ್ನು ಉಪಕೃತರನ್ನಾಗಿ ಮಾಡಿದ್ದಾರೆ.

ಶ್ರೀ ಭುಜಗೌಡರು ತರುಣ ಸಾತ್ವಿಕ ಗೌಡರು. ತಂದೆಯ ತರುವಾಯ ಊರ ಆಡಳಿತವನ್ನು ವಹಿಸಿಕೊಂಡವರು. ಆದರಂತೆ ಮನೆತನದ ಹಿರಿಯ ಪರಂಪರೆಯನ್ನು ನಡೆಯಿಸಿಕೊಂಡು ಹೋಗುತ್ತಿದ್ದಾರೆ. ಇಂಥವರಿಂದ ಇನ್ನೂ ಹೆಚ್ಚು ಹೆಚ್ಚಾಗಿ ಕನ್ನಡಸಾಹಿತ್ಯ ಸಂಸ್ಕೃತಿಗಳ ಬೆಳವಣಿಗೆಗೆ ಸಹಾಯ ಸಲ್ಲುವುದರಲ್ಲಿ ಸಂದೇಹವಿಲ್ಲ.

ಇಂಥ ಧಾರ್ಮಿಕ, ಸಾಹಿತ್ಯಿಕ ಚಟುವಟಿಕೆಗಳು ಶ್ರೀಯುತರಿಂದ ನಡೆಯುವುದಕ್ಕೆ ಪ್ರೇರಕರಾಗಿ ನಿಂತ ಶ್ರೀಗಳಾದ ಅಣ್ಣಾಸಾಹೇಬ ಪಾಯಗೌಡ ಪಾಟೀಲ ಸದಲಗಿ, ಅಣ್ಣಾಗೌಡ ಆದಗೌಡ ಪಾಟೀಲ ಉಗಾರ ಇವರಿಗೂ ಕೂಡ ನಾವು ತುಂಬ ಕೃತಜ್ಞರಾಗಿದ್ದೇವೆ.

ಕೊನೆಗೆ ನಮ್ಮ ಮುಂದಿನ ಪ್ರಕಾಶನವಾದ 'ಜೈನಧರ್ಮವು' ಗ್ರಂಥಕ್ಕೆ ನಾಡಿನ ಮಹಾಜನರೆಲ್ಲರೂ ಸಹಾಯವನ್ನು ನೀಡಬೇಕೆಂದು ಪ್ರಾರ್ಥಿಸುವೆವು.

ಶಾಂತಿಸೇವಾಸದನ
ಸೇಡಬಾಳ
೧೨—೧—೧೯೫೧

ಸಂಪಾದಕರು



ಶ್ರೀ. ಪಾಸಗೌಡಾ ಅಪ್ಪಾಗೌಡಾ ಪಾಟೀಲ

ಉಗಾರ

# ಶೋಭನಸಂಧಿಗಳು ಮತ್ತು ಪೀಠಿಕೆ



**ಭರತೇಶವೈಭವ ಶೋಭನಸಂಧಿಗಳು ದೊರೆತುವೆಂತು?**

ಉಗಾರ (ಬೆಳಗಾಂವಿ ಜಿಲ್ಲೆ) ಊರಿನ ಗೌಡರಾದ ಶ್ರೀಯುತ ಪಾಸಗೌಡ ಅಪ್ಪಾಗೌಡ ಪಾಟೀಲ ಇವರ ಮನೆಯಲ್ಲಿ ಕೆಲವು ಹಳೆಯ ಗ್ರಂಥಗಳಿವೆಯೆಂದು ಕೇಳಿದ್ದೆ. ಒಂದು ದಿನ ಅವರ ಹತ್ತರ ಹೋಗಿ "ತಮ್ಮಲ್ಲಿ ಹಳೆಯ ಪುಸ್ತಕಗಳಿವೆಯಂತೆ, ತೋರಿಸುತ್ತೀರಾ?" ಎಂದು ಕೇಳಿದೆ. ಅದಕ್ಕೆ ಅವರು ಸಂತೋಷದಿಂದ ಬೇಕಾದಾಗ ಬಂದು ನೋಡ ಬಹುದೆಂದು ಹೇಳಿದರು. ನನಗೂ ಅದೇ ಬೇಕಾದುದರಿಂದ, ಅದೇ ದಿವಸ ಸಂಜೆಗೆ ಗ್ರಂಥಗಳನ್ನು ನೋಡಲೆಂದು ಅವರ ಮನೆಗೆ ಹೋದೆ. ಆಗ ಅವರು ನನ್ನನ್ನು ಪಡಸಾಲೆಯಲ್ಲಿ ಕೂಡಿಸಿ, ಮನೆಯಲ್ಲಿ ಅತ್ತಿತ್ತ ಅಡ್ಡಾಡಿ, ಹಲವು ಮಾಡಗಳಲ್ಲಿ ಕೈಹಾಕಿ, ಕೊನೆಗೊಂದು ಚಿಕ್ಕ ಹೊತ್ತಿಗೆಯನ್ನು ತಂದು ನನ್ನ ಕೈಗಿತ್ತರು. ಅದು ಪದ್ಮನಾಭ ಕವಿಯ 'ಪದ್ಮಾವತೀ ಮಾಹಾತ್ಮ್ಯ' ಎಂಬ ಪುಸ್ತಕದ ಕೆಲಭಾಗವಾಗಿತ್ತು. ಅದರ ಸ್ವಲ್ಪ ಭಾಗವನ್ನು ಅವರಿಗೆ ಓದಿ ಹೇಳಿದೆ. ಆಗ ಗೌಡರಿಗೆ ಹಿಡಿಸಲಾರದಷ್ಟು ಆನಂದವಾಯಿತು. ಈತನಿಗೆ ಹಳಗನ್ನಡ ಓದಲು ಬರುವದೆಂದು ಕೂಡಲೆ ಒಳಗೆ ಹೋಗಿ, ಹತ್ತಾರು ಹೊತ್ತಿಗೆಗಳನ್ನು ತಂದು ನನ್ನ ಮುಂದೊಗೆದರು. ಆಗ ನನಗೆ ಆದ ಆನಂದಕ್ಕೆ ಪಾರವೇ ಉಳಿಯಲಿಲ್ಲ. ಆ ಆನಂದದ ಭರದಲ್ಲಿ ಅವುಗಳನ್ನೆಲ್ಲ ಆಗಲೇ ನಾನು ನಿರೀಕ್ಷಿಸುವ ಗೋಜಿಗೆ ಹೋಗಲಿಲ್ಲ. ಈ ಕೆಲಸ ಬಹಳ ದೊಡ್ಡದು. ಒಂದೊಂದಾಗಿಯೇ ನೋಡಬೇಕೆಂದು ಒಂದು ಗ್ರಂಥವನ್ನಷ್ಟೇ ತಕ್ಕೊಂಡೆ. ಅದರ ಮೇಲೆ 'ಶ್ರೀಆದಿನಾಥ ಚರಿತ್ರ' ಎಂದು ಬರೆದಿದ್ದಿತು. ನನಗೆ ಪಂಪಮಹಾಕವಿಯ ಆದಿಪುರಾಣವಿರಬೇಕೇನೋ ಎಂದು ಭಾಸವಾಯಿತು.

ಅದೇ ಗ್ರಂಥದ ಮೇಲಿನ ಹಾಳೆಯ ಮತ್ತೊಂದು ಮೂಲೆಯಲ್ಲಿ ನೋಡು ವಾಗ 'ಭರತೇಶ್ವರ ಪುರಾಣ' ಎಂದಿತ್ತು. ಇರಲಿ ನೋಡೋಣವೆಂದು ಆದೊಂದು ಗ್ರಂಥವನ್ನು ತಕ್ಕೊಂಡು ಬಂದೆ. ಆದರಲ್ಲಿ ಈ ನಾಲ್ಕು ಶೋಭನಸಂಧಿಗಳು ದೊರೆತವು.

## ಪ್ರತಿಯ ಸ್ವರೂಪ

ಇದು ಹಳೆಯ ಕಾಗದದ ಮೇಲೆ ಬರೆದ ೫೭೭ ಪುಟಗಳ ಹಿರಿ ಹೊತ್ತಿಗೆ. ಸುವಾಚ್ಯವಾದ ಅಕ್ಷರಗಳಿಂದ ಬರೆಯಲ್ಪಟ್ಟಿದೆ. ಒಳ್ಳೆಯ ಸ್ಥಿತಿಯಲ್ಲಿದೆ. ಇದರಲ್ಲಿ ಭರತೇಶವೈಭವದ ೮೧ ಸಂಧಿಗಳಿವೆ. ಅಲ್ಲದೆ ಪ್ರತಿ ಮಾಡಿದವನು ಬರೆದು ಸೇರಿಸಿದ ಒಂದು ಗದ್ಯಭಾಗವೂ ಕೊನೆಯಲ್ಲಿದೆ. ಆ ಗದ್ಯವಿಭಾಗಕ್ಕೆ ಪ್ರತಿಕಾರನು 'ಬಿರುದಾವಳಿಸಂಧಿ' ಎಂದು ಕರೆದಿದ್ದಾನೆ. ಈಗ ಪ್ರಕಟ ವಾದ ಭರತೇಶವೈಭವದ ಗ್ರಂಥಕ್ಕೆ ಹೋಲಿಸಿ ನೋಡಿದರೆ, ಈ ಪ್ರತಿಯಲ್ಲಿ (೧) ಪ್ರಥಮಕಲ್ಯಾಣದ ಶೋಭನಸಂಧಿ (೨) ಮಧ್ಯಮಂಗಲದ ಶೋಭನ ಸಂಧಿ (೩) ತೃತೀಯ ಶೋಭನಸಂಧಿ (೪) ಅಂತ್ಯಮಂಗಲಕಲ್ಯಾಣ ಅಥವಾ ಚತುರ್ಥ ಮಂಗಲಸಂಧಿ ಎಂದು ನಾಲ್ಕು ಸಂಧಿಗಳೂ ಅಲ್ಲದೆ ಮೇಲೆ ಹೇಳಿದ ಗದ್ಯಭಾಗವೂ ಕೂಡಿ ೫ ಸಂಧಿಗಳು ಹೆಚ್ಚಾಗಿವೆ. ಮತ್ತು ಅಚ್ಚಾದ ಗ್ರಂಥದಲ್ಲಿರುವ (೧) ರಾಜ್ಯಲಾವಣ್ಯಸಂಧಿ, (೨) ಮನ್ನಣೆಸಂಧಿ, (೩) ಸರ್ವರ ಮೋಕ್ಷಸಂಧಿ ಹೀಗೆ ಮೂರು ಸಂಧಿಗಳು ಇಲ್ಲ. ೫ ಸಂಧಿಗಳು ಹೆಚ್ಚಿಗೆ ಸೇರಿ ಒಟ್ಟಿಗೆ ೮೫ ಸಂಧಿಗಳಾಗಬೇಕಾದುದು. ಆದರೆ, ಈ ಮೂರು ಸಂಧಿಗಳು ಇಲ್ಲದುದರಿಂದ ೮೨ ಸಂಧಿಗಳೇ ಆಗಿವೆ. ಇನ್ನು ಅಚ್ಚಿನ ಪ್ರತಿಯಲ್ಲಿ ಯೋಗವಿಜಯದಲ್ಲಿರುವ 'ರಾಜ್ಯಪಾಲನಸಂಧಿ'ಯು ಈ ಪ್ರತಿಯಲ್ಲಿ ಭೋಗವಿಜಯದಲ್ಲಿದೆ. ಈ ಪ್ರತಿಯ ಆದಿಯಲ್ಲಿರುವ ಪದ್ಯರೂಪದ ವಿಷಯಾನುಕ್ರಮಣಿಕೆಯಲ್ಲಿ "ಆಸ್ಥಾನ-ಕವಿವಾಕ್ಯ-ಮುನಿಭುಕ್ತಿ ಕ್ರಮದಿಂದ ...... ಸರ್ವರ ದೀಕ್ಷಾಸಂಧಿಯೆಂಬಲ್ಲಿಗೆ ಪರಿಪೂರ್ಣ ಎಂಬತ್ತು ಸಂಧಿ" ಎಂದೇ ಹೇಳಲಾಗಿದೆ. ಆದರೂ ಕೊನೆಯ ದೀಕ್ಷಾಸಂಧಿಯು ಈ ಪ್ರತಿಯಲ್ಲಿ ಇಲ್ಲ. ಪ್ರತಿಯ ಕೊನೆಯ ಗದ್ಯದಲ್ಲಿ " ಸ್ವಸ್ತಿ ಸಮಸ್ತ ಕವಿಜನ ವಿಸ್ತಾರಕ ಯಿಂದಿರಸೊದೆರ ಸುರಚಿರಕಾರ ವೃಂದಾರಕ ರಾಜಾನಂದ ಕಂದರ್ಪಸ್ವರೂಪ

........ ಅದೃಶ್ಯಕರಣ, ಪ್ರಸಾದಲಕ್ಷಣ........ ಹಯರೂಢ.... ಗಜಲಕ್ಷಣ" ಮೊದಲಾದ ವಿಶ್ವವೈಭವಗಳೆಲ್ಲ ಭರತೇಶನಿಗೆ ಇದ್ದುವು. ಈ ಗ್ರಂಥವನ್ನು "ಮನವಿಟ್ಟು ಕೇಳಿದವರಿಗೆ ಓದಿದವರಿಗೆ ಒಡಂಬಟ್ಟವರಿಗೆ ಭರತೇಶ್ವರನಂತೆ ಸಕಲ ಭಾಗ್ಯೋದಯವಾಗಿ ಸಕಲ ಕರ್ಮನಿರ್ಧೂತವಾಗಿ ಮೋಕ್ಷಕ್ಕೆ ಕಾರಣವೆಂದು ಜಿನಾಗಮ ಸಿದ್ಧಾಂತ ಕರವೀರದ ಶ್ರೀಚಿಂತಾಮಣಿ ಪಾರ್ಶ್ವನಾಥನ ಪಾದಸನ್ನಿಧಿಯೊಳು ಭರತೇಶ್ವರರ ಪುರಾಣ ಸಂಪೂರ್ಣಂ" ಎಂದು ಹೇಳಲಾಗಿದೆ.

**ಸಂಪಾದನೆ**

ಈ ಶೋಭನಸಂಧಿಗಳು ನನಗೆ ಕ್ರಿ. ಶ. ೧೯೪೩ನೆಯ ವರ್ಷದಲ್ಲಿಯೇ ದೊರೆತವು. ಮುಂದೆ ಕೆಲ ದಿನಗಳಲ್ಲಿಯೇ 'ಜೀವನ' ಮಾಸಪತ್ರಿಕೆಯಲ್ಲಿ ಒಂದೆರಡು ಸಂಧಿಗಳೂ ಅವುಗಳ ಪರಿಚಯ ಲೇಖನವೂ ಪ್ರಕಟವಾದುವು. ಆದರೂ ಕನ್ನಡನಾಡಿನ ಸಂಶೋಧಕರ ಲಕ್ಷ್ಯ ಇತ್ತ ಹರಿಯುವಂತೆ ತೋರಲಿಲ್ಲ. ಅಂದರೂ ನಾನು ಸಮಯ ಸಿಕ್ಕಾಗ ಮೂಡುಬಿದರೆ, ಶ್ರವಣ ಬೆಳ್ಗೊಳ, ಆರಾ ಮೊದಲಾದ ನಗರಗಳಲ್ಲಿರುವ 'ಭರತೇಶವೈಭವ'ದ ಹಸ್ತಪ್ರತಿಗಳನ್ನು ನಿರೀಕ್ಷಿಸಿದೆನು. ಆದರೆ ಯಾವುದರಲ್ಲಿಯೂ ಶೋಭನ ಸಂಧಿಗಳು ಇರುವಂತೆ ತೋರಲಿಲ್ಲ. ಆದರೆ ಭರತೇಶವೈಭವವನ್ನು ಓದಿದಾಗ-ಲೆಲ್ಲ ಎರಡರಲ್ಲಿಯೂ ಇರುವ ಕಾವ್ಯಶೈಲಿಯೊಳಗಿನ ಸಾಮ್ಯವು ನನ್ನ ಮನಸ್ಸನ್ನು ಆಕರ್ಷಿಸುತ್ತ ಹೋಯಿತು. ಈಗ ಇಲ್ಲಿಯ ತರುಣ ಗೌಡರೂ ದಿ. ಪಾಸಗೌಡರ ಚಿರಂಜೀವರೂ ಆದ ಶ್ರೀ. ಭುಜಗೌಡರು ಉದಾರಹಸ್ತ ದಿಂದ ದ್ರವ್ಯಸಹಾಯವನ್ನು ಸಲ್ಲಿಸಿದ್ದರಿಂದ, ಇದಕ್ಕೆ ಒಂದು ರೂಪದಲ್ಲಿ ಬೆಳಕು ಕಾಣುವ ಸುಯೋಗ ಒದಗಿತು.

ಈ ಶೋಭನಸಂಧಿಗಳ ಸಂಪಾದನಕಾರ್ಯದಲ್ಲಿ ಅನ್ಯ ಪ್ರತಿಗಳ ಸಹಾಯವಿಲ್ಲ. ದೊರೆತುದು ಒಂದೇ ಪ್ರತಿ. ಅದರಲ್ಲೂ ಅಲ್ಲಲ್ಲಿ ಅಕ್ಷರದೋಷ ಗಳೂ ಪದದೋಷಗಳೂ ಇವೆ. ಆದರೂ ನನಗೆ ತಿಳಿದಷ್ಟು ಸರಿಪಡಿಸಲು ಯತ್ನಿಸಿದ್ದೇನೆ. ಸರಿತೋರಿದುದನ್ನು ಇಟ್ಟರೂ ಮೂಲ ಪ್ರತಿಯಲ್ಲಿರುವದನ್ನು ಅಲ್ಲಲ್ಲಿ ಅಡಿಟಿಪ್ಪಣಿಯಲ್ಲಿ ಸೂಚಿಸಿರುವೆ. ಮೇಲಾಗಿ ನಡುನಡುವೆ ಒಂದೆರಡ ಕ್ಷರಗಳನ್ನು ಸೇರಿಸಬೇಕಾದ ಪ್ರಸಂಗ ಬಂದಲ್ಲಿ, ಅಲ್ಲಿಯೇ ಚೌಕುಕಂಸಿನಲ್ಲಿ

ಅಂಥವುಗಳನ್ನು ಬರೆದಿರುವೆ. ಅದರೊಡನೆಯೇ ಮೂಲ ಮಾತುಗಳನ್ನೂ ಇಟ್ಟಿರುವೆ. ಸಂಶಯ ಉಳಿದಲ್ಲಿ ಪ್ರಶ್ನೆಚಿಹ್ನೆಗಳಿಂದ ವ್ಯಕ್ತಪಡಿಸಿರುವೆ.

## ಶೋಭನಸಂಧಿಗಳು ಮತ್ತು ಅವುಗಳ ಕರ್ತೃ

ದೇವಚಂದ್ರನು ರಾಜಾವಳಿ ಕಥೆಯಲ್ಲಿ ಭರತೇಶವೈಭವಕ್ಕೆ ೮೪ ಸಂಧಿಗಳೆಂದು ಹೇಳುತ್ತಾನೆ. ಅದರಂತೆ ಈಗ ಪ್ರಕಟವಾದ ಭರತೇಶವೈಭವವನ್ನು ಓದಿದರೆ, ಓದುಗರಿಗೆ ಗ್ರಂಥದ ಅಪೂರ್ಣತೆಯ ಭಾಸವಾಗುವುದು. ಕವಿಯು ಭರತೇಶನ ಭೋಗವಿಜಯ, ದಿಗ್ವಿಜಯ, ಯೋಗವಿಜಯ, ಮೋಕ್ಷವಿಜಯ, ಅರ್ಕಕೀರ್ತಿವಿಜಯವೆಂದು ಪಂಚಕಲ್ಯಾಣಗಳನ್ನು ಸವಿಸ್ತಾರವಾಗಿ ವರ್ಣಿಸಿರುವನು. ಆದರೆ ಭರತೇಶನ ಜನ್ಮ, ತಂದೆತಾಯಂದಿರುಗಳ ವಿಷಯಕ್ಕೆ ಒಂದು ಮಾತನ್ನೂ ಆರಂಭದಲ್ಲಿ ಹೇಳದೆ ಒಮ್ಮೆಲೇ ಆಸ್ಥಾನಸಂಧಿಗೇನೇ ಹೇಗೆ ಹಾರಿಬಂದಿರಬೇಕು? ಎಂಬ ಪ್ರಶ್ನೆಯೊಂದು ಉದ್ಭವಿಸುವದು. ಅದಕ್ಕೆ ಉತ್ತರ ಈ ಶೋಭನಸಂಧಿಗಳಿಂದ ಸಿಕ್ಕುತ್ತದೆ. ಈ ಶೋಭನಸಂಧಿಗಳಲ್ಲಿ ವರ್ಣಿಸಲ್ಪಡುವ ವಿಷಯವು ಭರತೇಶನ ವೈಭವಕಥನಕ್ಕೆ—ಪ್ರಥಮಾನುಯೋಗಶಾಸ್ತ್ರಕ್ಕೆ ಅವಶ್ಯವೆನಿಸುವುದರಿಂದ, ಈ ನಾಲ್ಕು ಸಂಧಿಗಳು ಗ್ರಂಥದ ಮೊದಲಿನ ಭಾಗವೇ ಆಗಿರಲಿಕ್ಕೆಬೇಕು. ಈಗ ದೊರೆತ ಪ್ರತಿಯಲ್ಲಿ ಇವು ಗ್ರಂಥದ ಆದಿಭಾಗಕ್ಕೇನೇ ಇವೆ.

ಈ ನಾಲ್ಕು ಸಂಧಿಗಳು ಗ್ರಂಥದ ಅಂಗವಾಗಿಯೇ ಇದ್ದುವೆನ್ನುವುದಕ್ಕೆ ಇನ್ನೊಂದು ಆತಂಕವುಂಟು. ಅದಾವುದೆಂದರೆ ಈ ಶೋಭನಸಂಧಿಗಳ ಸುಮಾರು ೩೦೦ ಪದ್ಯಗಳು ತ್ರಿಪದಿಯಲ್ಲಿದ್ದು ಉಳಿದ ಗ್ರಂಥವೆಲ್ಲ ಸಾಂಗತ್ಯದಲ್ಲಿದೆ. ಈ ಸಂಧಿಗಳೂ ಗ್ರಂಥದ ಭಾಗವೇ ಆಗಿದ್ದರೆ ಇವೂ ಸಾಂಗತ್ಯದಲ್ಲಿ ಇರಬೇಕಾಗಿತ್ತು ಎಂದು ಅನಿಸುವದು. ಇದಕ್ಕೆ ಹೀಗೂ ಒಂದು ಸಮಾಧಾನ ಹೇಳಬಹುದು. ರತ್ನಾಕರವರ್ಣಿಯೇ ಸ್ವತಃ ತನ್ನ ಕಾವ್ಯವನ್ನು 'ಹಾಡುಗಬ್ಬ'ದ ಜಾತಿಗೆ ಸೇರಿಸಿರುವನು. ಮತ್ತು ಆತನ ಗುರುಗಳು "ಕವಿತ್ವದ ಉಪಯೋಗ ಜನತೆಗಾಗಬೇಕು" ಎಂದು ಆಜ್ಞಾಪಿಸಿದ್ದರಂತೆ. ಮೇಲಾಗಿ ಕವಿ ನೂತನ ಕಾವ್ಯಮಾರ್ಗದ ಮೇಲೆ ಪ್ರೀತಿಯಿದ್ದವ. ಸಂಪ್ರದಾಯಗಳನ್ನು ಕಟ್ಟಿಕೊಂಡು ಉಸಿರು ಸಿಕ್ಕು ಸಾಯುವ ಕವಿಯ ರೀತಿಯು

ತಿಪನಿಗೆ ಸೇರುವದಿಲ್ಲ. ಇದಕ್ಕಾಗಿಯೇ ಆತನು ವಸ್ತುಕದ ಹಾದಿ ಬಿಟ್ಟು ವರ್ಣಕ ಕಾವ್ಯದ ಬೆನ್ನುಹತ್ತುವನು; ವೃತ್ತಗಳನ್ನು ಬಿಟ್ಟು ಸಾಂಗತ್ಯವನ್ನು ಬಳಸಿ ಆದರಲ್ಲಿ ಉಳಿದೆಲ್ಲ ಕಾವ್ಯಗಳಿಗಿಂತ ದೊಡ್ಡದಾದ ಕಾವ್ಯ 'ಬರೆಯುತ್ತಾನೆ."* ಅಂತೂ ರತ್ನಾಕರವರ್ಣಿಗೆ ತನ್ನ ಕಾವ್ಯವು ಹೆಚ್ಚು ಜನರಿಗೆ ತಿಳಿಯಬೇಕು, ಹಲವು ಜನರು ಹಾಡಿ ಹರುಷಗೊಳ್ಳಬೇಕು, ಎಂದು ಮನಸ್ಸಿರಬೇಕು, ಇತ್ತು. ಅಂತೇ ಆತನು ಕಾವ್ಯ ಬರೆಯಲು ಆರಂಭಿಸುವಾಗ ಹಳ್ಳಿಯ ಹೆಂಗಸರು ಬೀಸುವಾಗ, ಕುಟ್ಟುವಾಗ ಹಾಡುವ, ಒಕ್ಕಲಿಗರು ಕೆಲಸಮಾಡುತ್ತ ಹಾಡುವ ಹಂತಿಯ ಹಾಡುಗಳ ಛಂದಸ್ಸನ್ನೇ ಎತ್ತಿಕೊಂಡು —ತ್ರಿಪದಿಯನ್ನು ವಿಸ್ತರಿಸಿ ಸಾಂಗತ್ಯವನ್ನಾಗಿ ಮಾಡಿಕೊಂಡು—ಮಹಾಕಾವ್ಯವನ್ನು ಬರೆದನು. ಹೀಗೆ ಮಾಡುವಾಗ ಆರಂಭದಲ್ಲಿ ಕವಿಯು ತನ್ನ ಹಾಡುಗಬ್ಬವನ್ನು ತ್ರಿಪದಿಯಲ್ಲಿಯೇ ಬರೆಯಲು ತೊಡಗಿರಬೇಕು. ಮುಂದೆ ನಾಲ್ಕು ಸಂಧಿಗಳಷ್ಟು ಕಾವ್ಯವು ಬರೆಯಲ್ಪಟ್ಟ ನಂತರ ತ್ರಿಪದಿಯಲ್ಲಿಯ ಎರಡನೆಯ ಚರಣವನ್ನು ಎರಡು ಸಲ ಅನ್ನುವುದು ಕಾವ್ಯದ ದೃಷ್ಟಿಯಿಂದ ಅಷ್ಟು ಸಮರ್ಪಕವೆಂದು ತೋರದೆ ಇರಲು ತ್ರಿಪದಿಯನ್ನೇ ಹಿಗ್ಗಿಸಿ ಸಾಂಗತ್ಯವನ್ನಾಗಿ ಮಾಡಿರಲೂಬಹುದು ಕವಿ.

ಛಂದಸ್ಸು ಬಲ್ಲವರಿಗೆ ಇದೇನು ಅಸಂಭವವಾಗಿ ತೋರಲಿಕ್ಕಿಲ್ಲ. ತ್ರಿಪದಿಯ ಎರಡನೆಯ ಚರಣವನ್ನು ಮೊದಲಿನ ಮೂರು ಗಣಕ್ಕೆ ನಿಲ್ಲಿಸಿ, ಅದನ್ನು ಎರಡನೆಯ ಚರಣವೆಂದು ಭಾವಿಸಿ, ಮತ್ತೆ ಅದೇ ಚರಣವನ್ನು ಮೊದಲಿನಿಂದ ಪ್ರಾರಂಭಿಸಿ ಮುಗಿಸಿ ಅದನ್ನು ಮೂರನೆಯ ಚರಣವೆಂದು ಕಲ್ಪಿಸಲು ಬರುವದು. ಉಳಿದ ಕೊನೆಯ ಚರಣವು ಆಗ ನಾಲ್ಕನೆಯ ಚರಣವಾಗುವುದು. ತ್ರಿಪದಿಯು ಬೆಳೆದು ಸಾಂಗತ್ಯವಾದ ಬಗೆಯಿದು:—

ಭರತ ಚಕ್ರೇಶ್ವರಗೆ ಪರಿಪೂರ್ಣ ಸುಖವಿತ್ತು |
ಪರಮ ಮಂಗಲನೆ ಪರಮಾತ್ಮ, ಪರಬೊಮ್ಮ |
ಗುರು ಹಂಸನಾಥ ಮತಿದೋರು ...

---

* 'ಜೀವನ' ಪತ್ರಿಕೆಯಲ್ಲಿ ಪ್ರ. ವಿ. ಕೃ. ಗೋಕಾಕರ "ರತ್ನಾಕರ ವರ್ಣಿಯ ಕಾವ್ಯಧರ್ಮ" ಲೇಖನ ಸಂಪುಟ ೨, ಸಂಚಿಕೆ ೫.

ಭರತ ಚಕ್ರೇಶ್ವರಗೆ ಪರಿಪೂರ್ಣ ಸುಖವಿತ್ತು ।
ಪರಮ ಮಂಗಲನೆ ಪರಮಾತ್ಮ ।
ಪರಮ ಮಂಗಲನೆ ಪರಮಾತ್ಮ ಪರಬೊಮ್ಮ ।
ಗುರು ಹಂಸನಾಥ ಮತಿದೋರು ।

ಹೀಗೆ ಛಂದಸ್ಸನ್ನು ಮಾರ್ಪಡಿಸಿಕೊಂಡು ಕವಿಯು ಆಸ್ಥಾನಸಂಧಿಯಿಂದ ಸಾಂಗತ್ಯದಲ್ಲಿ ಕಾವ್ಯವನ್ನು ಹೇಳಲು ಪ್ರಾರಂಭಿಸಿರಬೇಕು.

"ಈ ಛಂದಸ್ಸಿನ ಭೇದವನ್ನಲ್ಲದೆ ಕಾವ್ಯದ ಮಧ್ಯಮಗುಣ, ಮುಂತಾದ ಅಂಶಗಳನ್ನು ನೋಡಿದರೆ ಈ ಶೋಭನಸಂಧಿಗಳನ್ನು ರತ್ನಾಕರ ವರ್ಣಿಯ ಕಾವ್ಯಸಾಗರದಲ್ಲಿ ಮುಳುಗಿ ಎದ್ದ ಅವನ ಪ್ರಶಂಸಕನೊಬ್ಬನು ತರುವಾಯದ ಕಾಲದಲ್ಲಿ ಬರೆದಿರಬಹುದೇನೋ ಎಂದು ತಾತ್ಪೂರ್ತಿಕವಾಗಿ ನನಗೆ ತೋರುತ್ತದೆ" ಎಂಬರ್ಥದ ಟಿಪ್ಪಣಿಯೊಂದನ್ನು ಪ್ರೊ. ರಂ. ಶ್ರೀ. ಮುಗಳಿಯವರು ಮೊದಲ ಸಲ ಈ ಸಂಧಿಗಳು "ಜೀವನ" ಪತ್ರಿಕೆಯಲ್ಲಿ ಪ್ರಕಟವಾದಾಗ ಬರೆದರು.* ಈ ಶೋಭನಸಂಧಿಗಳನ್ನು ಓದಿದಾಗ ಶೈಲಿಯಲ್ಲಿ ಶಿಥಿಲತೆಯೇನೋ ಕೆಲವು ಕಡೆಗಳಲ್ಲಿ ಗೋಚರಿಸಬಹುದು. ಅದರಂತೆ ರತ್ನಾಕರವರ್ಣಿಯ ಕಾವ್ಯಗುಣಕ್ಕೂ ಈ ಸಂಧಿಗಳ ಕಾವ್ಯ ಗುಣಕ್ಕೂ ಅಂತರ ತೋರಬಹುದು. ಅದರಿಂದ ಭರತೇಶವೈಭವವನ್ನು ರಚಿಸಿದ ಕವಿಯೇ ಇದನ್ನೂ ಬರೆದನೆ? ಎಂಬ ಪ್ರಶ್ನೆ ಆರಂಭದಲ್ಲಿ ಬಹು ಜನರಲ್ಲಿ ಉದ್ಭವಿಸುವುದು. ಭರತೇಶವೈಭವದ ಮೃದುಮಧುರವಾದ ಪದ ರಚನೆ, ವರ್ಣನಾವೈಖರಿ, ಕಥನಕೌಶಲಗಳು ಈ ಶೋಭನಸಂಧಿಗಳಲ್ಲಿ ಎಲ್ಲೆಡೆಗೂ ತೋರಲಾರವು. ಅದರಿಂದ ಇದು ಇತ್ತೀಚಿನ ಕಾಲದಲ್ಲಿ ಇನ್ನಾ ರಾದರೂ ರಚಿಸಿದ ಕೃತಿಯಾಗಿರಬೇಕೆ? ಎಂಬ ಪ್ರಶ್ನೆಯೂ ಏಳುವುದು. ಆದರೆ ಭರತೇಶವೈಭವ ಗ್ರಂಥದ ಸಂಪಾದಕರೂ ಪರಿಶೋಧಕರೂ ಆದ ಶ್ರೀಮಾನ್ ಉಗ್ರಾಣ ಮಂಗೇಶರಾವ್, ಪುತ್ತೂರು ಇವರು ಪೀಠಿಕೆಯಲ್ಲಿ ಹೇಳುವಂತೆ "ಆ ಹೆಚ್ಚಿನ ನಾಲ್ಕು ಸಂಧಿಗಳು ಶೋಭನಸಂಧಿಗಳಾಗಿದ್ದು-

---

* "ಜೀವನ" ಮಾಸಪತ್ರಿಕೆ. ಸಂ. ೫. ಸಂಚಿಕೆ ೧೦.

ದರಿಂದ ಗ್ರಂಥದ ಅಂಗವೆಂದು ಪರಿಗಣಿಸಲ್ಪಡದೆ ಅವನ್ನು ಗ್ರಂಥದೊಂದಿಗೆ ಬರೆದಿಡುವ ಕ್ರಮವೇ ಇಲ್ಲದೆ ಅವು ನಷ್ಟವಾಗಿರುವವು." ಆದರೆ ಆ ನಾಲ್ಕು ಸಂಧಿಗಳು ಮಾತ್ರ ಜನರ ಬಾಯಲ್ಲಿ ಉಳಿದುಕೊಂಡು ಕೆಲವು ಕಾಲ ಬದುಕಿ ಬಂದಿರಬೇಕು. ಆಗ ಹಾಡುವವರ ಒಲವು, ವಿದ್ಯೆಗಳಿಗೆ ಅನುಸರಿಸಿ ಆ ಪದ್ಯಗಳಲ್ಲಿ ಎಷ್ಟೋ ವ್ಯತ್ಯಾಸವಾಗುತ್ತ ಹೋಗಿರಲೂ ಬೇಕು. ಅದರಿಂದ ಈ ಸಂಧಿಗಳನ್ನು ಪ್ರತಿಮಾಡುವ ಕಾಲಕ್ಕೆ ಮೂಲಕವಿಯಾದ ರತ್ನಾಕರ ವರ್ಣಿಯ ಕಾವ್ಯದ ಬಿಗುವಾಗಲಿ, ಭಾಷಾಸೌಷ್ಠವವಾಗಲಿ ಸ್ವಲ್ಪ ಮಾಸಿರುವುದೂ ಸ್ವಾಭಾವಿಕವಾಗಿದೆ. ಈ ಸಂಗತಿಯನ್ನು ಗಮನಿಸಿದರೆ ಈ ಶೋಭನಸಂಧಿಗಳು ಮೂಲದಲ್ಲಿ ರತ್ನಾಕರ ವರ್ಣಿಯು ರಚಿಸಿದವುಗಳೇ ಆಗಿರಬೇಕೆಂದು ಯಾರೂ ಒಪ್ಪಬಹುದು.

ಈ ಶೋಭನ ಸಂಧಿಗಳನ್ನು ರತ್ನಾಕರ ಕವಿಯೇ ರಚಿಸಿದ್ದಾನೆಂಬುದಕ್ಕೆ ಕಾವ್ಯದ ಅಂತರಿಕ ಪ್ರಮಾಣಗಳನ್ನೂ ಇಲ್ಲಿ ನಾವು ನೋಡಬೇಕು. ಭರತೇಶ ವೈಭವದ 'ಸ್ತ್ರೀರತ್ನ ಸಂಭೋಗ ಸಂಧಿ' ಯಲ್ಲಿ ನೇಮಿರಾಜನು ತನ್ನ ತಂಗಿಯಾದ ಸುಭದ್ರಾದೇವಿಯನ್ನು ಭರತಚಕ್ರವರ್ತಿಗೆ ಮದುವೆ ಮಾಡಿಕೊಟ್ಟ ಸಂಗತಿಯು ವರ್ಣಿಸಲ್ಪಟ್ಟಿದೆ. ಅದರಂತೆ ಶೋಭನಸಂಧಿಗಳಲ್ಲಿ ಕಿಕ್ಕಿಂದಪುರದ ದಿವಿರಾಜನು ತನ್ನ ಮಗಳಾದ ಕುಂತಳವತಿಯನ್ನು ಭರತಚಕ್ರಿಗೆ ಮದುವೆಮಾಡಿ ಕೊಟ್ಟ ವರ್ಣನೆಯು ಬರುತ್ತದೆ. ಇವೆರಡೂ ವರ್ಣನೆಗಳಲ್ಲಿಯ ಸಾಮ್ಯವನ್ನು ನಾವು ಇಲ್ಲಿ ನಿರೀಕ್ಷಿಸಬೇಕು.

| ಭರತೇಶವೈಭವ | ಶೋಭನ ಸಂಧಿಗಳು |
| --- | --- |
| ಪೆಣ್ಣಿನ ಪಕ್ಕದ ನೃಪರ ನೆರಹಿ<br>ಕೊಂಡು । | ದೊರೆದೊರೆಗಳು ನಾಯಕರು ।<br>ಪರಿವಾರ ಗಜತೇಜಿ । |
| ಬಣ್ಣ ಬೆಳಕಿನ ಗಾಡಿಯೊಳು । | ಸಿರಿ ಠಕ್ಕೆಯ ಪಂಜಿನೊಳಿದ್ದನು |
| ತಣ್ಣವೆಳುದಿಂಗಳೊಳು ಪಂಜು<br>ಕೋಟಿಯು । | ದಿವಿರಾಜ । |
| ಹಣ್ಣಿಸಿ ನಡೆತರುತಿರ್ದಾ | |

ಮಂತ್ರದ ವಿಪ್ರರುಗೂಡಿ
ಚಕ್ರೇಶ್ವರನ ।
ಮಂತ್ರಿ ಮತ್ತೊಳಹೊಕ್ಕನಾಗ ।
ಮುತ್ತಿನ ಮೆಟ್ಟಕ್ಕಿಯೊಳು
ಕನ್ನೆನಿಂದಳು ।
ಮುತ್ತಿನ ತೆರೆಯ ಮರೆಯೊಳು ।
ಮತ್ತಕಾಶಿನಿಯರು ಹಾಡುತಿರ್ದರು
ಸ್ವರ- ।
ವೆತ್ತ ಶೋಭನ ಧವಳಗಳಾ ।

ಮಾನಿತ ಮಂತ್ರದ ದ್ವಿಜರು ।
ಸನುಮತದಿಂದನೊಳಪೊಕ್ಕ
ದಿವಿರಾಜ
ಮುತ್ತಿನ ಮೆಟ್ಟಕ್ಕಿಯಲಿ ।
ಮೆತ್ತನೆ ನಿಂದಳು ಕನ್ನೆ ।
ಮತ್ತಧವಳವ ಪಾಡುತಿದ್ದರು
ಕೆಳದಿಯರು ।

ಪರಮ ಮಂತ್ರವನೋದಿ
ಮುತ್ತಿನಕ್ಷತೆಗಳ ।
ಹರಸಿ ದಂಪತಿಗಳಿಗಿಡುತ ।
ತಿರುಗಿ ಮತ್ತಾಯುತವೆಯೆಂಬರ-
ದಕೆ ಚಿ- ।
ತ್ತರದೊಳಾಯುತವೆಂಬರೊಸೆದು ।

ಶ್ರೀಯುತಮಂತ್ರವನೋದಿ ।
ದಾಯದಿ ಸೇಸೆಯನಿಡುತ ।
ಆಯುತವೆಯೆನಲಾಯುತ-
ವೆಂಬರು ಕೆಲರು ।

ಭರತೇಶವೈಭವದ ಈ 'ಸ್ತ್ರೀರತ್ನಸಂಭೋಗಸಂಧಿ' ಯಲ್ಲಿ ಮದುವೆಯ ಕಾಲಕ್ಕೆ ಮತ್ತಕಾಶಿನಿಯರು ಶೋಭನಧವಳಗಳನ್ನು ಹಾಡಿದ ಉಲ್ಲೇಖ ಮಾತ್ರ ಬಂದಿದೆ. ಆದರೆ ಭರತಚಕ್ರಿಯ ಮೊಟ್ಟಮೊದಲಿನ ಮದುವೆಯ ವರ್ಣನೆಯಾದ ಕುಂತಳವತಿಯ ಲಗ್ನದಲ್ಲಿ ಹಾಡಿದ 'ಧವಳಶೋಭನ' ವನ್ನೇ ಕವಿಯು ಪೂರ್ಣ ಬರೆದಿದ್ದಾನೆ. ಅದು ಶೋಭನಸಂಧಿಗಳ ಅಂಗವಾಗಿ ಇಲ್ಲಿ ಬಂದಿದೆ. ಇವನ್ನು ನಿರೀಕ್ಷಿಸಿದರೆ ಕಾವ್ಯದಲ್ಲಿ ಪುನರುಕ್ತಿಯ ದೋಷವು ಆಗದಂತೆ ಕವಿಯು ಮುಂದಿನ ವಿವಾಹವನ್ನು ಸಂಗ್ರಹವಾಗಿ ವರ್ಣಿಸಿರುವನೆಂಬುದು ಗೊತ್ತಾಗುವುದು. ಇದಲ್ಲದೆ ಭರತೇಶವೈಭವದೊಳಗಿನ ವಾಕ್ಯಗಳ ಛಾಯೆಯಂತಿರುವ ಶೋಭನಸಂಧಿಗಳಲ್ಲಿಯ ಕೆಲವು ವಾಕ್ಯಗಳನ್ನು ಇಲ್ಲಿ ನೋಡಬಹುದು.

| ಭರತೇಶವೈಭವ | ಶೋಭನಸಂಧಿಗಳು |
|---|---|
| ಮಂಡಲಿಕರ ಕೈಯ ಹಡಪ<br>ಹಾವುಗೆ ಕುಂಚ \| ಗಿಂಡಿಯ<br>ಪಿಡಿಸಿಕೊಂಬವನು । ... ... ॥ ೯ ॥ | ಗಿಂಡಿ ಹಡಪ ಕುಂಚ ಕಂಡಿಯ<br>ಕಿಂಸಿಕೊಂಡು । ಸೇವಕರು<br>ಬಳಿಸಾರಿ । |
| —ಮುನಿಭುಕ್ತಿಸಂಧಿ | —ಪ್ರಥಮ ಕ. ಶೋಭನ ೨೨ |
| ....ತುರುಬು ಚುಂಗೆಸೆಯೆ ಚಿಮ್ಮುರಿ<br>ಸುತ್ತಿ ಸೊಬಗನೆ । ಕರೆವುತಿದ್ದನು<br>ನೋಡುವರಿಗೆ । ೩೪ | .... ಸೀದುರುಬು ನಿಡು ಚುಂಗು<br>ಚಿಮ್ಮುರಿ ಪುರ್ದಿಸುತಿಹುದು<br>ಮದನನ |
| —ಆಸ್ಥಾನಸಂಧಿ | ಪ್ರ. ಕ. ಶೋ. ೧೭ |

ಈ ಹೋಲಿಕೆಗಳಲ್ಲದೆ ರತ್ನಾಕರವರ್ಣಿಯ ಕಾವ್ಯದಲ್ಲಿ ಬರುವ ನಿರಂಜನ ಸಿದ್ಧ, ಚಿದಂಬರ ಪುರುಷ, ಗುರು ಹಂಸನಾಥ ಮೊದಲಾದ ಅಂಕಿತಗಳು ಈ ಶೋಭನಸಂಧಿಗಳಲ್ಲೂ ದೊರೆಯುತ್ತವೆ. ಈ ಎಲ್ಲ ಪ್ರಮಾಣಗಳನ್ನು ಕಣ್ಣಿಟ್ಟು ನೋಡಿದರೆ ಈ ಶೋಭನಸಂಧಿಗಳ ಕರ್ತೃವು ರತ್ನಾಕರ ಕವಿಯೇ ಎಂಬುದು ನಿಶ್ಚಿತಗೊಳ್ಳುತ್ತದೆ.

## ರತ್ನಾಕರ ಕವಿ

ರತ್ನಾಕರ ಕವಿಗೆ ರತ್ನಾಕರಸಿದ್ಧ, ರತ್ನಾಕರವರ್ಣಿ, ರತ್ನಾಕರ ಅಣ್ಣ ಮೊದಲಾದ ಹೆಸರುಗಳಿವೆ. ಈತನು ಮೂಡುಬಿದರೆಯ ಸೂರ್ಯವಂಶದಲ್ಲಿ ಜನಿಸಿದ ದೇವರಾಜನ ಮಗನೆಂದು ದೇವಚಂದ್ರನ ರಾಜಾವಳೀ ಕಥೆಯಿಂದ ಗೊತ್ತಾಗುವುದು. ಇವನ ತಂದೆ-ತಾಯಿಗಳು ಇವನಿಗೆ ರತ್ನಾಕರನೆಂದು ಹೆಸರಿಟ್ಟಿದ್ದರು. ಮುಂದೆ ಇವನು ಚಾರುಕೀರ್ತಿಯೋಗೀಶ್ವರರ ಹತ್ತಿರ ದೀಕ್ಷೆಯನ್ನು ತಕ್ಕೊಂಡನು. ತಪಸ್ಸುಮಾಡಿ ಸಿದ್ಧಿಯನ್ನು ಸಂಪಾದಿಸುತ್ತ ಹೋದಂತೆ ಇವನಿಗೆ ಸಿದ್ಧ, ವರ್ಣಿ ಮೊದಲಾದ ಹೆಸರುಗಳು ಬಂದಿರಬೇಕು.

ರತ್ನಾಕರ ಕವಿಯು ತ್ರಿಲೋಕಶತಕ, ರತ್ನಾಕರಾಧೀಶ್ವರಶತಕ, ಅಪರಾಜಿತೇಶ್ವರಶತಕ ಮತ್ತು ಭರತೇಶ್ವರವೈಭವಗಳನ್ನು ರಚಿಸಿದ್ದಾನೆ. ಮೊದಲನೆಯ ಶತಕದಲ್ಲಿ ಕವಿಯು ಮೂರು ಲೋಕವನ್ನು ವರ್ಣಿಸಿದ್ದಾನೆ. ಉಳಿದ ಎರಡು ಶತಕಗಳು ವೈರಾಗ್ಯವನ್ನು ಬೋಧಿಸುತ್ತವೆ. ಇವುಗಳಿಗೆ ಸಾಮಾನ್ಯವಾಗಿ ಶತಕಗಳೆಂದು ಕರೆದರೂ ಪ್ರತಿಯೊಂದೂ ೧೨೮ ಪದ್ಯಗಳಿಂದ ಕೂಡಿದವುಗಳಾಗಿವೆ. ಭರತೇಶವೈಭವದಲ್ಲಿ ಭರತಚಕ್ರವರ್ತಿಯ ಕಥೆ ವರ್ಣಿಸಲ್ಪಟ್ಟಿದೆ. ಇದರಲ್ಲಿ ೪+೮೦ ಸಂಧಿಗಳೂ, ೩೧೩+೯, ೯೬೬೯ ಪದ್ಯಗಳೂ ಇವೆ. ಈ ಗ್ರಂಥವನ್ನು ಕವಿಯು ಭೋಗವಿಜಯ, ದಿಗ್ವಿಜಯ, ಯೋಗವಿಜಯ, ಮೋಕ್ಷವಿಜಯ, ಅರ್ಕಕೀರ್ತಿವಿಜಯಗಳೆಂದು ಐದು ಕಲ್ಯಾಣಗಳಾಗಿ ವಿಭಾಗಿಸಿದ್ದಾನೆ. ಭೋಗವಿಜಯದ ಆರಂಭದ ಸಂಧಿಗಳಿಗೇನೇ ಶೋಭನಸಂಧಿಗಳೆಂದು ಹೆಸರಿದೆ. ಈ ಮಹಾಕಾವ್ಯದಲ್ಲಿ ಕವಿಯು ಭೋಗಯೋಗಗಳೆರಡನ್ನೂ ಸುಂದರವಾಗಿ ಸಮನ್ವಯಿಸಿ ವರ್ಣಿಸಿದ್ದಾನೆ. ಈತನು ಕ್ರಿ. ಶ. ೧೫೫೭ರಲ್ಲಿ ಕೃತಿರಚನೆಯನ್ನು ಮಾಡಿದ ಬಗ್ಗೆ ದೇವಚಂದ್ರನು ತಿಳಿಸಿದ್ದಾನೆ.

## ಕಥಾವಸ್ತು

ಕೃತಯುಗದ ಆರಂಭದಲ್ಲಿ ಅಯೋಧ್ಯನಗರದೊಳಗೆ ಇಂದ್ರಾದಿ ದೇವತೆಗಳಿಂದ ಪೂಜೆಗೊಳ್ಳುವ ವೃಷಭನಾಥನು ರಾಜ್ಯವಾಳುತ್ತಿದ್ದನು. ಅವನನ್ನು ಪುರುನಾಥ, ತೀರ್ಥೇಶ, ಆದಿಬ್ರಹ್ಮ ಮೊದಲಾದ ಹೆಸರುಗಳಿಂದ ಸುರರು ಕರೆಯುತ್ತಿದ್ದರು. ಅವನ ಐಶ್ವರ್ಯಕ್ಕೆ ಅಳತೆಯಿರಲಿಲ್ಲ. ಅವನಿಗೆ ಸರಸ್ವತಿದೇವಿ ಮತ್ತು ಸುನಂದಾದೇವಿ ಎಂಬಿಬ್ಬರು ಹೆಂಡಿರು. ಹಿರಿಯಾಕೆಯು ನೂರೊಂದು ಮಕ್ಕಳನ್ನು ಹೆತ್ತಳು. ಕಿರಿಯಾಕೆಗೆ ಇಬ್ಬರೆ ಮಕ್ಕಳು. ಸರಸ್ವತಿದೇವಿಗೆ ಭರತನೆಂದು ಮಗನು ಜನಿಸಿದನು. ಅವನು ಮುಂದೆ ಭರತಖಂಡವನ್ನು ಆಳುವನೆಂದು ತಂದೆಯು 'ಭರತ'ನೆಂದು ಹೆಸರಿಟ್ಟನು. ಮುಂದೆ ಭರತನು ಹದಿನೆಂಟು ವರ್ಷದ ಪ್ರಾಯಕ್ಕೆ ಬಂದನು. ಆಗ ಅವನ ದೇಹ ದರ್ಪವೇರಿತು, ಪನ್ನೆ ಕಪ್ಪುದೋರಿತು, ಹೊಚ್ಚ ಹೊಸ ಪ್ರಾಯದ ಕಾಂತಿಯಿಂದ ಆ ಯುವರಾಜ ಶೋಭಿಸತೊಡಗಿದ. ಅದ

ಅವನ ನಡೆನುಡಿಗಳಲ್ಲಿ ಚಂಚಲತೆಯಿಲ್ಲ, ಭ್ರಾಂತಿಯಿಲ್ಲ. ಗಂಭೀರವಾಗಿಯೇ ಇರುತ್ತಿದ್ದನು. ಇದನ್ನೆಲ್ಲ ಕಂಡು ತಂದೆಯಾದ ವೃಷಭದೇವನು ಮಗನ ಮದುವೆಯ ಯೋಚನೆಯನ್ನು ನಡೆಯಿಸಿದನು. ಆ ವಿಷಯದಲ್ಲಿ ತನ್ನ ರಾಣಿಯರೊಡನೆ ಚರ್ಚಿಸಿದನು. ಮುಂದೆ ಅವನು ತೊಂಬತ್ತಾರು ಸಾವಿರ ಹೆಣ್ಣುಗಳನ್ನು ತರುವನಾದರೂ ಮೊದಲ ಮದುವೆಯನ್ನು ತಾನು ಮಾಡ ಬೇಕೆಂದು ಹೆಂಡರಿದುರಿಗೆ ನುಡಿದ. ಕೊನೆಗೆ ತನ್ನ ಮಗ—ಭರತ—ಮುಕ್ತಿ ಗೇರುವವನೆಂದೂ ಹೇಳಿದ. ಇಂಥವನಿಗೆ ಯೋಗ್ಯವಾದ ಹೆಣ್ಣು, ಕರ್ನಾಟಕ ದೇಶದ ಕಿಷ್ಕಿಂಧಪುರದೊಡೆಯನಾದ ದಿವಿರಾಜನಿಗೂ ಅವನ ಪಟ್ಟದರಸಿ ಯಾದ ಸುರದೇವಿಗೂ ಜನಿಸಿದ ಕುಂತಳವತಿಯೆಂಬುದನ್ನೂ ಸೂಚಿಸಿದನು. ಆ ಹೆಣ್ಣು ಭರತನಿಗಾಗಿಯೇ ಹುಟ್ಟಿದುದು. ಆದರಿಂದ ಅವಳನ್ನು ತನ್ನ ಮಗನಿಗಾಗಿ ಬೇಡಲು ವೃಷಭದೇವನು ಒಳ್ಳೆಯ ದಿನ ಒಂದನ್ನು ನೋಡಿ, ಮದುವೆಗೆ ಮಗನ ಒಪ್ಪಿಗೆಯನ್ನು ಪಡೆದು, ನಾಗರಿಕರ ಸಮ್ಮತಿ ಪಡೆದು, ಕುರುವಂಶತಿಲಕನಾದ ಸೋಮಪ್ರಭನನ್ನು ಕಳುಹಿದನು. ಅವನ ಕೈಯಲ್ಲಿ ತಾನೊಂದು ಓಲೆಯನ್ನೂ ಕೊಟ್ಟನು. ಮಡುಗೋಲೆಯನ್ನು ತಕ್ಕೊಂಡು ಊರ್ಜಿತನೆಂಬ ಆಳು ಕಿಷ್ಕಿಂಧಪುರಕ್ಕೆ ಮುಂದೆ ಹೋದ. ಸೋಮಪ್ರಭನು ದಾರಿಯಲ್ಲಿ ಅನೇಕ ಶುಭಶಕುನಗಳನ್ನು ಕಾಣುತ್ತ ಅವನ ಹಿಂದೆಯೇ ಸಾಗಿದ. ಇದೆಲ್ಲ ಭರತ ಭೂಭುಜನ ಪುಣ್ಯವಲ್ಲದೆ ಇನ್ನೇನು ?

× × × ×

ಅತ್ತ ಕಿಷ್ಕಿಂಧಪುರದಲ್ಲಿ ದಿವಿರಾಜ ಚಿಂತೆಯಲ್ಲಿದ್ದಾನೆ. ಮಗಳು ಕುಂತಳವತಿ ಮದುವೆಗೆ ಬಂದಳು. ಇನ್ನೂ ಆದೀಶ ಹೇಳಿ ಕಳಿಸಲಿಲ್ಲ. ಹುಟ್ಟಿದಾಗಲೇ ಇವಳು ಭರತಚಕ್ರಿಗೆ ಮಡದಿಯಾಗುವಳೆಂದು ಶಕುನಿಗರು ಹೇಳಿದ್ದಾರೆ. ಹೆಣ್ಣು ಕೇಳಲಿಕ್ಕೆ ಬಂದರೆ ಒಯ್ಯುವುದು ಉಚಿತ. ಹಾಗೇ ಒಯ್ದು ಕೊಡುವುದು ಅನುಚಿತ. ಈ ಚಿಂತೆಯಲ್ಲಿ ಕುಂತಳವತಿಯ ತಾಯಿ ಸುರದೇವಿಗೂ ಅಣ್ಣ ಭಾನುರಾಜನಿಗೂ ದಿನವೊಂದು ಯುಗವಾಗಿ ಕಳೆಯು ತ್ತಿದೆ. ಆದರೆ ಅವರು ಚಿಂತೆ ಮಾಡುವಾಗ ಅನೇಕ ಶುಭಶಕುನಗಳು ತೋರುತ್ತಿದ್ದವು. ಅದರಲ್ಲೂ ಕುಂತಳವತಿಯಂತೂ ಅಯೋಧ್ಯಪಟ್ಟಣದಿಂದ ಯಾರಾದರೂ ಪತ್ರ ತಕ್ಕೊಂಡು ಬಂದು, ತನ್ನ ತಂದೆಯನ್ನು ಕಂಡಂತೆ

ಕನಸು ಕಾಣುತ್ತಿದ್ದಳು, ಮನದಲ್ಲಿ ಹಿರಿಹಿರಿ ಹಿಗ್ಗುತ್ತಿದ್ದಳು. ತನ್ನ ಸೇವಕಿಯೂ ಆತ್ಮೀಯಳೂ ಆದ ನಂದಕಿಯೆಂಬವಳ ಕಿವಿಯಲ್ಲುಸುರಿ ನಸು ಲಜ್ಜೆವಡೆದು, ಏನೂ ಅರಿಯದಂತೆ ಇರುತ್ತಿದ್ದಳು. ಎಷ್ಟಾದರೂ ಭಾವಜೀವಿಯಾದ ಎಳೆ ಪ್ರಾಯದ ಹೆಣ್ಣಲ್ಲವೇ ಕುಂತಳವತಿ?

ಇಷ್ಟರಲ್ಲಿ ವೃಷಭದೇವನ ಕಾಗದವನ್ನು ತಕ್ಕೊಂಡು ಊರ್ಜಿತನೆಂಬವನು ಕಿಷ್ಕಿಂಧ ನಗರಿಯನ್ನು ಪ್ರವೇಶಿಸಿದನು. 'ಆದೀಶನು ಸೋಮಪ್ರಭನನ್ನು ಕಳಿಸಿರುವನು, ಆತ ಹಿಂದಿನಿಂದ ಬರುತ್ತಿದ್ದಾನೆ' ಎಂದು ಹೇಳಿ ಕಾಗದವನ್ನು ಕೊಟ್ಟ. ಆದೀಶನ ಲೇಖನವನ್ನು ಓದಿ ದಿವಿರಾಜನು ಆನಂದಪಟ್ಟ. ಮೇಲಾಗಿ ಅದಕ್ಕೆ ನಮಿಸಿದ. ಸಂಗತಿಯನ್ನು ಕೂಡಲೆ ಒಳಗೂ ಅರುಹಿದ. ಆ ಮೇಲೆ, ಕೂಡಲೆ ಮಂತ್ರಿಗಳನ್ನು ಕರೆಯಿಸಿ ಊರನ್ನು ಸಿಂಗರಿಸಲು ಹೇಳಿದ. ರಾಜನ ಆಜ್ಞೆ; ಕೇಳುವದೇನು? ಬೇಗನೆ ಬೀದಿಯನ್ನು ಉಡುಗಿಸಿ, ಪನ್ನೀರನ್ನು ಚಿಮುಕಿಸಿ, ಕಸ್ತೂರಿಯನ್ನು ಹೂಸಿ, ಹೂವನ್ನು ಇಡಲು ಎಳೆದುಂಬಿಗಳು ಘುಮ್ಮೆಂದು ಮುತ್ತಿದವು. ಅದರಂತೆ ಅರಮನೆ, ಕೋಟೆ, ಗೋಪುರ, ಅಂಗಡಿ, ವಾರಾಂಗನೆಯರ ಕೇರಿ ಮೊದಲಾದವುಗಳನ್ನೂ ಸಿಂಗರಿಸಲಾಯಿತು. ಆಗ ಕಿಷ್ಕಿಂಧಪುರವು ಇಂದ್ರನ ಪುರದಂತೆ ಕಂಗೊಳಿಸಹತ್ತಿತು.

ಇದಾಗುವುದರಲ್ಲಿಯೇ ಸೋಮಪ್ರಭನು ಬಂದ ವಾದ್ಯಗಳ ಧ್ವನಿಯಾಯ್ತು. ಅಲ್ಲದೆ ಇನ್ನೊಬ್ಬ ಆಳೂ ಬಂದು ದಿವಿರಾಜನಿಗೆ ಅರುಹಿದ. ಅವನಿಗೆ ಉಚಿತ ಮರ್ಯಾದೆಯನ್ನು ಸಲ್ಲಿಸಿ, ಆಪ್ತನನ್ನು ಎದುರುಗೊಳ್ಳಲಿಕ್ಕೆ ದಿವಿರಾಜನು ಆನೆಯನ್ನೇರಿ ಸಂಭ್ರಮದಿಂದ ನಡೆದನು. ಆಗ ಗಜವೆಷ್ಟು, ಪತಾಕೆಗಳೆಷ್ಟು, ವಾದ್ಯಗಳೆಷ್ಟು ಇವುಗಳ ಲೆಕ್ಕವೇ ಇರಲಿಲ್ಲ. ಎರಡೂ ದಿಬ್ಬಣಗಳು ಸೇರಿ ಮಹಾ ಸಮುದ್ರದಂತೆಯೇ ತೋರಹತ್ತಿತು. ಸೋಮಪ್ರಭ ದಿವಿರಾಜನು ಒಬ್ಬರೊಬ್ಬರನ್ನು ಕಂಡು, ಸವಿನುಡಿಯಿಂದ ಕ್ಷೇಮದ ನುಡಿಗಳನ್ನು ಆಡಿದರು. ತಿರುಗಿ ಅರಮನೆಗೆ ಇಬ್ಬರೂ ಸೇರಿ ಬರುವಾಗ ಕಿಷ್ಕಿಂಧಪುರದ ಸಿಂಗರವನ್ನು ಕಂಡು ಸೋಮಪ್ರಭರಾಜ ಮೆಚ್ಚಿ ತಲೆದೂಗಿದ.

ಹೀಗೆ ವೈಭವದಿಂದ ಬಂದು, ಅರಮನೆಯ ಮುಂದೆ ಆನೆಯಿಂದ ಇಳಿದರು. ಓಲಗದಲ್ಲಿ ಮಂತ್ರಿ ಸಾಮಂತರೊಡನೆ ಕೆಲವು ಹೊತ್ತು ಕುಶಲದ ಮಾತುಗಳನ್ನು ಆಡುತ್ತ ಕಳೆದರು. ಆಮೇಲೆ ಅನ್ನ, ಕಜ್ಜಾಯ, ನೊರೆಹಾಲು, ಘಟ್ಟಿ ಮೊಸರು, ಪಾಯಸ, ಸಕ್ಕರೆ, ಬೆಣ್ಣೆ ಮೊದಲಾದ ಉತ್ಕೃಷ್ಟ ಪದಾರ್ಥಗಳಿಂದ ಎಲ್ಲರೂ ಭರತೇಶನನ್ನು ನೆನೆದು ಊಟ ಮಾಡಿದರು, ತೃಪ್ತಿಬಟ್ಟರು. ಪರಿಮಳ, ವೀಳೆಯ, ವಸ್ತ್ರಭೂಷಣಗಳನ್ನು ಬಂಧುಗಳಿಗೂ ಪರಿವಾರಕ್ಕೂ ಕೊಟ್ಟರು. ತರುವಾಯ ಹೇಮದುಪ್ಪರಿಗೆಯಲ್ಲಿ ವಿಶ್ರಮಿಸಿದರು.

ಒಂದೆರಡು ದಿನಗಳು ವಿಶ್ರಾಂತಿಯಲ್ಲಿಯೇ ಉರುಳಿದವು. ಆಮೇಲೆ ಒಂದು ದಿನ ಅರಮನೆಯ ಓಲಗದಲ್ಲಿ ಸೋಮಪ್ರಭನು ಮೆಲ್ಲನೆ ಹೀಗೆ ಹೇಳಿದನು,—"ಪುರುನಾಥನ ಹೆಮ್ಮಗನಿಗೆ ನಿನ್ನ ಮಗಳನ್ನು ತರುವೆವು ಎಂದು ನಮ್ಮನ್ನು ಕಳುಹಿರುವನು. ಕುಂತಳವತಿಯನ್ನು ಷಟ್ಖಂಡದೊಡೆಯನೂ ಬಹು ಚೆಲುವನೂ ಆದ ಭರತನಿಗೆ ಕೊಡು." ಈ ಮಾತಿಗೆ ದಿವಿರಾಜನು,—"ನೀವು ನುಡಿದುದು ಉತ್ತಮ, ಲೇಸು. ನೀವು ಬೇಡುವುದು ಒಳಿತು. ಹುಟ್ಟಿದಾಗಲೆ ಹೆಣ್ಣು ಆತನಿಗೆ ಕೊಟ್ಟದ್ದು. ಈಗ ಕೊಟ್ಟೆನೆನ್ನುವುದು ಉಪಚಾರದ ಮಾತು. ಇರಲಿ. ಉಡುಗೊರೆ ಮೊದಲಾದವುಗಳನ್ನು ಕುಲದ ಸಿರಿಯನ್ನು ನೆನದು ಈಯುವೆ." ಎಂದು ಮೊದಲಾಗಿ ಮಾತುಕತೆಗಳಾಗಿ ಇಬ್ಬರಲ್ಲಿಯೂ ವೀಳೆಯದ ಒಸಗೆ ಸಂದಿತು, ಉಡುಗೊರೆಗಳಾದವು. ಆದೇ ಕ್ಷಣಕ್ಕೆ ಭರತೇಶನ ಅತ್ತೆಯರಿಗೂ ಊಳಿಗದ ಹೆಂಗಳಿಗೂ ಪುರುನಾಥನ ಸೊಸೆಗೂ ಸೋಮಪ್ರಭನು ವಸ್ತ್ರ, ಪರಿಮಳ, ಭೂಷಣಗಳನ್ನು ಕಳುಹಿದನು. ಅದರಂತೆ ಭಾನುರಾಜನಿಗೂ ಕವಿಗಳಿಗೂ ಸೇನೆಗೂ ಮೆಚ್ಚು ಕೊಟ್ಟಾಯಿತು.

ಸ್ವಲ್ಪ ದಿನಗಳಲ್ಲಿಯೇ ಒಳ್ಳೆಯ ದಿನವೊಂದನ್ನು ನೋಡಿ ನಗರ ರಕ್ಷಣೆಗೆ ಸೇನೆಯನ್ನು ಇಟ್ಟು, ಮಗಳೊಡನೆ ದಿಬ್ಬಣ ಸಹಿತ ಅಯೋಧ್ಯೆಗೆ ದಿವಿರಾಜನು ನಡೆದನು. ದೇವರಿಗೆ ಹೂವೊಂದನ್ನು ಒಯ್ಯುವಂತೆ ಭರತನಿಗೆ ತರುಣಿಯನ್ನು ಒಯ್ಯುತ್ತಿದ್ದರು. ಆವಳಿಗೆ ದಣಿವು ತೋರದಂತೆ ದಾರಿಯಲ್ಲಿ

ಆಗಾಗ ತಂಗುತ್ತ ಪಯಣ ಬೆಳೆಯಿಸಿದರು. ಸೋಮಪ್ರಭ ಮುಂದೆ ಸಾಗಿದ.

ದಿವಿರಾಜನು ಅಯೋಧ್ಯೆಯನ್ನು ತಲುಪುವುದರಲ್ಲಿಯೇ ಊರು ಕಂಚು ಕಾಂಚನ, ಮುತ್ತು ರತ್ನಗಳ ತೋರಣಗಳಿಂದ ಸಿಂಗರವಾಯಿತು. ಆದೀಶನ ಆಜ್ಞೆಯಂತೆ ಅಳಿಯರು, ಸಖರು ಮೊದಲಾದವರು ದಿವಿರಾಜ ನನ್ನು ಎದುಗೊಂಡು ಕರೆದು ತಂದರು. ಮೊದಲೇ ಸಜ್ಜುಗೊಳಿಸಿದ ಒಂದು ಅರಮನೆಯಲ್ಲಿ ದಿಬ್ಬಣವನ್ನು ಇಳಿಸಿದರು. ಆದರೆ ದಿವಿರಾಜನು ಅತ್ತ ತೆರಳದೆ ಮೊದಲು ತನ್ನ ಮಗನನ್ನು ಕೂಡಿಕೊಂಡು ವೃಷಭದೇವನ ದರ್ಶನಕ್ಕೆ ಬಂದು ನಮಿಸಿದ. ಸುರರು ಎರಗುವವನಿಗೆ ನರರು ಎರಗುವುದು ಆಶ್ಚರಿಯೆ?

ಆದಿನಾಥನು ತಂದೆ ಮಕ್ಕಳಿಗೆ ಕೂಡಲಿಕ್ಕೆ ಆಸನವನ್ನು ಕೊಡಿಸಿದ. ಅಲ್ಲದೆ ದಿವಿರಾಜನು ತಮಗೆ ಪರಮ ಬಾಂಧವನೆಂದು ಉಳಿದವರಿಗೆ ಅವನ ಪರಿಚಯಮಾಡಿಕೊಟ್ಟನು. ಪುರುನಾಥನ ಈ ಮಾತುಗಳನ್ನು ಕೇಳಿ ಸೋಮಪ್ರಭನು "ನಿನ್ನ ಪುತ್ರನಿಗೆ ತಕ್ಕ ಕನ್ನೆಯನ್ನು ಹೆತ್ತ ಈತನು ಶ್ರೇಷ್ಠ ಬಂಧುವಲ್ಲದೆ ಇನ್ನೇನು?" ಎಂದು ಹೊಗಳಿಕೆಯ ಮಾತುಗಳನ್ನು ಆಡಿದನು. ಆದಕ್ಕೆ ದಿವಿರಾಜನು,—" ನೀನು ಹೀಗೆ ನುಡಿಯಬೇಕೆ? ನಾನು ಪುರುದೇವನನ್ನು ಪೂಜಿಸುವ ಅಲ್ಪ ಮಾನವನು. ತೀರ್ಥಂಕರನಲ್ಲಿ ಚಕ್ರವರ್ತಿ ಹುಟ್ಟಿದುದು ನಮ್ಮ ಪುಣ್ಯ. ಹೆಣ್ಣೊಂದನ್ನು ಪ್ರೀತಿಯಿಂದ ಕೊಟ್ಟು ನಾನು ಸುಖಿಯಾಗುವೆ" ಎಂದು ಸಂದರ್ಭೋಚಿತ ನುಡಿಗಳನ್ನು ಆಡಿ, ಸುಮ್ಮನಾದನು. ಆದಿನಾಥನು ತಂದೆ ಮಕ್ಕಳಿಗೆ ಉಚಿತ ಉಡುಗೊರೆ ಗಳನ್ನು ಕೊಟ್ಟು ಕಳುಹಿದನು. ಉಳಿದ ನೃಪರಿಗೂ ಆಪ್ತರಿಗೂ ಉಲುಪಿ ಉಡುಗೊರೆಗಳನ್ನು ಇತ್ತು, 'ಬಳಲಿದಿರಿ; ಹೋಗಿರಿ!' ಎಂದು ಅಪ್ಪಣೆ ಕೊಡಿಸಿದ. ಹೊರಗೆ ಇಷ್ಟು ನಡೆಯುವಷ್ಟರಲ್ಲಿ ಒಳಗೆ ಅವನ ರಾಣಿಯರು ದಿಬ್ಬಣದ ಮನೆಗೆ ಅನ್ನದ ಪಾತ್ರೆಯನ್ನು ಕಳುಹಿದ್ದರು. ಮುಂದೆ ಮಂಗಲ ಕಾರ್ಯದ ಉದ್ಯೋಗದಲ್ಲಿ ವೃಷಭೇಶ ತೊಡಗಿದನು.

× × × ×

ವೃಷಭೇಶನು ಬಂದ ಬೀಗರಿಗೂ ರಾಜರಿಗೂ ಉಂಡು ತಿಂದು ಇರುವಂತೆ ಉಲುಪಿಯನ್ನು ಕೊಡುತ್ತ ಇದ್ದನು. ಕಚ್ಛರಾಜನೂ ಮಹಾ ಕಚ್ಛೇಂದ್ರನೂ ಸೋಮಪ್ರಭ ಮೊದಲಾದವರು ಬೀಗರ ಮನೆಗೆ ಹೋಗಿ ಮಾತನಾಡಿ, ದಿವಿರಾಜನಿಗೆ ಸಂತಸಗೊಳಿಸಿ ಬರುತ್ತಿದ್ದರು. ಏಳೆಂಟು ದಿನಗಳು ಕಳೆದ ಮೇಲೆ ಲೋಕ ಮೆಚ್ಚುವಂತೆ ತಾಳಿಬಂದಿಯ ಉತ್ಸವ ವನ್ನು ಆದಿನಾಥ ಮಾಡಿಸಿದ. ಮರುದಿನ ಮಂಗಲಕಾರ್ಯದ ಸಿದ್ಧತೆ ನಡೆ ಯಿತು. ಹತ್ತನೆಯ ದಿನದ ಇರುಳಿನಲ್ಲಿ ಉತ್ತಮ ಲಗ್ನವಿದ್ದಿತು. ಆದರಿಂದ ದಿವಿರಾಜನು ಮಗಳನ್ನು ಸಿಂಗರಿಸೆಂದು ಮಡದಿಗೆ ಹೇಳಿದನು.

ಆದಿತೀರ್ಥೇಶನ ಸೊಸೆಯ ಸಿಂಗರ! ಅಂದಮೇಲೆ ಕೇಳುವದೇನು? ಸ್ನಾನಮಾಡಿಸಿ ಹೂವಿನ ಬಾಣಕ್ಕೆ ಕವಚವನ್ನು ತೊಡಿಸುವಂತೆ ಸೀರೆ ಯನ್ನು ಉಡಿಸಿದರು. ಮುತ್ತಿನ ಬಳೆ ಹಾಕಿದರು. ಮುತ್ತಿನ ಬೈತಲೆಯು ನಕ್ಷತ್ರವು ಕತ್ತಲೆಯಲ್ಲಿ ಶೋಭಿಸುವಂತೆ ಕಂಗೊಳಿಸಹತ್ತಿತು. ಕಪೋಲ ದಲ್ಲಿ ಮಕರಿಕ ಪತ್ರ, ಹಣೆಯಮೇಲೆ ಬೊಟ್ಟು, ಮೂಗಿಗೆ ಮೂಗುತಿ ಮೊದ ಲಾದವುಗಳನ್ನು ಇಟ್ಟು ಸಿಂಗರಿಸಿದರು. ಕೊರಳಲ್ಲಿ ಮುತ್ತಿನಹಾರ, ಬೆರಳಲ್ಲಿ ಉಂಗುರ, ತೋಳುಗಳಲ್ಲಿ ಭುಜಕೀರ್ತಿ ತೊಡಿಸಿದರು. ನಡುವಿಗೆ ಕಟಿಸೂತ್ರ, ಕಾಲಲ್ಲಿ ಉಲಿವ ಅಂದುಗೆ, ವೀರಮುದ್ರಿಕೆ, ಪಿಲ್ಲಿ ಮೊದಲಾದವುಗಳನ್ನು ಇಟ್ಟರು. ಆಗ ನವರತ್ನಗಳ ಭೂಷಣಗಳಿಂದ ಒಪ್ಪುವ ಕುಂತಳವತಿಯು ಮಾಣಿಕದ ಪ್ರತಿಮೆಯಂತೆ ಕಂಡಳು. ಭರತೇಶನಿಗೆ ಜೋಡಿಯೆನಿಸಿದಳು.

ಅತ್ತ ಲಲನೆಯು ಸಿಂಗರವಾಗುವಾಗ ಇತ್ತ ಭರತೇಶನನ್ನು ಅವನ ಗೆಳೆಯರು ಸಿಂಗರಿಸಿದರು. ಸೆರಗು ತೋರುವಂತೆ ರಾಜಠೀವಿಯಲ್ಲಿ ಧೋತರ ಉಡಿಸಿದರು. ಹಣೆಯ ಮೇಲೆ ಮಂಗಲಕರವಾದ ಕಸ್ತೂರಿ ತಿಲಕವಿಟ್ಟರು. ಅದರ ಮೇಲ್ಭಾಗದಲ್ಲಿ ಬಣ್ಣದ ಗೊಂಡೆ ತುಸು ನೇತಾಡುವಂತೆ ಮಾಡಿ ದರು. ಚುಂಗುಬಿಟ್ಟು ಪಟಕಾ ಸುತ್ತಿದರು. ಕೊರಳಲ್ಲಿ ಮುತ್ತಿನ ಜನಿವಾರ, ಪದಕ, ಕೈಯಲ್ಲಿ ಕಡಗ ಉಂಗುರಗಳಿಂದ ಒಪ್ಪಿದನು. ಗೊಂಡೆಯ ಬಂಗಾ ರದ ಉಡುದಾರ ಪಾದಸರಗಳಿಂದ ಭರತೇಶನು ಕಾಮನನ್ನು ಸೋಲಿಸುವಂತೆ ಕಂಗೊಳಿಸಿದ. ನುಂಚಿನ ಉಂಗುಷ್ಟದಿಂದ ಕೂಡಿದ ಹೊಳೆವ ಪಾದರಕ್ಷೆ

ಗಳನ್ನು ಮೆಟ್ಟಿ ಮದುಮಗನು ವೀಳೆಯನ್ನು ಮೆದ್ದು, ತಾವರೆಯಂತಿರುವ ಕರತಳದಲ್ಲಿ ಕಠಾರಿಯನ್ನು ಹಿಡಿದುಕೊಂಡು ತಂದೆಯ ಪಾದಕ್ಕೆ ಬಂದು ಎರಗಿದನು. ತಂದೆ ಭೋಗಿಯಾಗೆಂದು ಹರಸಿದನು. ತಾಯಂದಿರು ಮಗನನ್ನು ಕಣ್ತುಂಬ ನೋಡಿ, ಸಂತಸಬಟ್ಟು ಆರತಿಯೆತ್ತಿದರು. ನಿವಾಳಿ ಒಗೆದರು. 'ಭೋಗಿಯಾಗಣ್ಣಾ। ತ್ಯಾಗಿಯಾಗಪ್ಪ।' ಎಂದು ಹರಸಿದರು. ಚಿನ್ನದ ಬಾಸಿಗ ಕಟ್ಟಿದರು. ಸುವರ್ಣಮಂಟಪದಲ್ಲಿ ಹೂವಿನ ಹಸೆಮಣೆಯಲ್ಲಿ ಕೂಡಿಸಿ, ಮುತ್ತಿನ ಸೇಸೆಯನ್ನು ಇಟ್ಟರು. ಆಮೇಲೆ ಬ್ರಾಹ್ಮಣತಿಯರೂ ಮುತ್ತೈದೆಯರೂ ಸೇಸೆಯನ್ನು ಇಟ್ಟರು. ಜನನಿಯರು ಮಾಡಿದ ಎಡೆಯಲ್ಲಿ ಭರತೇಶ ಊಟ ಮಾಡಿದ. ತರುವಾಯ ಕಚ್ಛರಾಜ, ಸೋಮಪ್ರಭ ಮೊದಲಾದವರೂ ಔತಣ ಮಾಡಿಸಿದರು. ಹತ್ತು ದಿನ ಊರಲ್ಲಿ ಮದುವಣಿಗನು ವಾದ್ಯಗಳ ಮೇಳದಲ್ಲಿ ಹೊತ್ತಿಗೊಂದು ರೀತಿ ಸಿಂಗರಿಸಿಕೊಂಡು ಮೆರೆದನು. ಪತಿಯ ಮಹಿಮೆಯನ್ನು ಕೇಳುತ್ತ ಕುಂತಳವತಿಯು ಪಿತನ ಮನೆಯಲ್ಲಿ ಸಂತಸದಿಂದ ಇರುತ್ತಿದ್ದಳು. ಹತ್ತನೆಯ ದಿನದ ಇರುಳಿನಲ್ಲಿ ಸುಮುಹೂರ್ತದೊಳಗೆ ಸೊಸೆಯು ಬರಲೆಂದು ಆದಿನಾಥ ಹೇಳಿದ. ಇದನ್ನು ಕೇಳಿ ದಿವಿರಾಜನಿಗೆ ಬಹಳ ಆನಂದವಾಯಿತು.

× × × ×

ದಿವಿರಾಜನು ಅನೇಕ ದೊರೆಗಳನ್ನೂ ನಾಯಕರನ್ನೂ ಕೂಡಿಕೊಂಡು ಮದುವೆಯ ಮಂಟಪಕ್ಕೆ ನಡೆದನು. ಕನ್ನೆಯೂ ಕನ್ನೆಯ ತಾಯಿಯೂ ಬಂಗಾರದ ಪಲ್ಲಕ್ಕಿಯಲ್ಲಿ ಕುಳಿತಿದ್ದರು. ಅನೇಕ ವಾದ್ಯಗಳೂ ಧವಲದ ಹಾಡೂ ಮನೋಹರವಾಗಿದ್ದುವು. ಹಲವು ಪಂಜುಗಳು ಬೆಳಕನ್ನು ಬೀರುತ್ತಿದ್ದುವು. ಮಂಟಪವನ್ನು ಪ್ರವೇಶಿಸುವಾಗ ಸೋಮಪ್ರಭನು ಬಂದು ಇದಿರುಗೊಂಡನು. ಜೊತೆಗೆ ಭಾನುರಾಜ, ಪಕ್ಷೀಂದ್ರ, ದ್ವಿಜರು ಇರಲಾಗಿ ದಿವಿರಾಜನು ಮಂಟಪದ ಒಳಹೊಕ್ಕನು. ಮುತ್ತಿನ ಮೆಟ್ಟಕ್ಕಿಯಲಿ ಕನ್ನೆ ನಿಂತಳು. ಶೃಂಗಾರವೇ ರಾಜನ ರೂಪು ತಾಳಿ ಬಂದಂತೆ ಭರತೇಶನು ಬಂದ. ತೆರೆಯ ಆಚೆಗೆ ಮಂಗಲಾಷ್ಟಕವನ್ನು ಬ್ರಾಹ್ಮಣರು ಹಾಡಿದರು. ಎಲ್ಲರೂ ಮಂತ್ರಾಕ್ಷತೆಯನ್ನು ಮದುಮಕ್ಕಳಿಗೆ ಇಟ್ಟರು. ತೆರೆ ತೊಲಗಿತು.

ದಿವಿರಾಜನು ತನ್ನ ಮಗಳ ಕೈಯಿಂದ ಭರತೇಶನಿಗೆ ಹಾರವನ್ನು ಹಾಕಿಸಿದನು. ಮತ್ತು ಎಳೆಯ ಮಲ್ಲಿಗೆಯನ್ನು ಮಲ್ಲಿಗೆಗೆ ತೊಡಿಸುವಂತೆ ತನ್ನ ಪುತ್ರಿಯ ಕೈಯನ್ನು ಅಳಿಯನ ಕೈಯಲ್ಲಿ ಕೊಟ್ಟು, ಧಾರೆಯೆರೆದನು. ಆಮೇಲೆ ಭರತೇಶನು ಹೆಂಡತಿಯೊಡನೆ ಹೋಮವನ್ನು ಸುತ್ತಿದನು. ಅದು ಚಂದ್ರನು ತನ್ನ ಸತಿಯೊಡನೆ ಮಂದರಗಿರಿಯನ್ನು ಸುತ್ತುವಂತೆ ಕಂಡಿತು. ಮುಂದೆ ಎರಡನೆಯ ದಿನದ ಉದಯದಲ್ಲಿ ಹೆಂಡತಿಯನ್ನು ಕೂಡಿಕೊಂಡು ತಂದೆಯ ದರ್ಶನಕ್ಕೆ ಭರತೇಶ ಹೋದನು.

× × × ×

ಕುಂತಳವತಿಯ ಹತ್ತಿರದ ದಾಸಿ ನಂದಕಿ. ಅವಳಿಗೆ ಹಿಂದೆ ನಿಲ್ಲುವಂತೆ ಭರತೇಶ ಸೂಚಿಸಿ, ತಾನೊಬ್ಬನೇ ತಂದೆತಾಯಂದಿರ ದರ್ಶನಕ್ಕೆ ಮುಂದೆ ಹೋದ. ಮಗನು ತಂದೆತಾಯಂದಿರ ಪಾದಕ್ಕೆ ಎರಗಲು ಅವರು ಹರಸಿದರು. ಹಿರಿಯರೆಲ್ಲರು ಮಗನ ಸೌಭಾಗ್ಯದ ಮಾತುಕತೆಗಳನ್ನು ಆಡುತ್ತ ಕೆಲಹೊತ್ತು ಕಳೆದರು. ಅಷ್ಟರಲ್ಲಿ ಹಿಂದುಳಿದ ಕುಂತಳವತಿಯು ಮಾವನ ಸನ್ನಿಧಿಗೆ ಬಂದಳು. ಹೆಂಡತಿ ಬರುವುದನ್ನು ಕಂಡಕೂಡಲೆ ಭರತೇಶನು ಎದ್ದು ಅಲ್ಲಿಂದ ತೆರಳಿದನು. ಆಗಲೂ ಪಡೆದವರಿಗೆ ವಂದಿಸದೆ ಇರಲಿಲ್ಲ ಆತ. ಮಗನ ಗಂಭೀರ ನಡತೆಯನ್ನು ನೋಡಿ ಹೆತ್ತವರು ಹರುಷಗೊಂಡರು. ಸೊಸೆಯು ಬಂದು ಮಾವನಿಗೆ ನಮಸ್ಕರಿಸಿದಳು. ನಂದಕಿಯ ಸೂಚನೆಯಂತೆ ಅತ್ತೆಯರಿಗೂ ವಂದಿಸಿದಳು. ಅತ್ತೆಮಾವಂದಿರು ಕೂಡಲಿಕ್ಕೆ ಹೇಳಲು ತಲೆ ತಗ್ಗಿಸಿ ಕುಳಿತಳು. ಎಲ್ಲರೂ ಸೊಸೆಯನ್ನು ನೋಡಿ ನಲಿದರು, ಕರೆಕರೆದು ತಮ್ಮೊಳಗೆ ತೋರಿಸಿದರು, ಭರತೇಶನಿಗೆ ತಕ್ಕ ಜಾಣೆಯೆಂದರು.

ಕೆಲವು ದಿನಗಳ ವರೆಗೆ ದಿವಿರಾಜನು ಅಯೋಧ್ಯೆಯಲ್ಲಿ ಕಳೆದನು. ಕೊನೆಗೆ ಅಳಿಯನಿಗೂ ಮಗಳಿಗೂ ಮತ್ತೆ ಮತ್ತೆ ಉಡುಗೊರೆ ಸಲ್ಲಿಸಿ ತನ್ನೂರಿಗೆ ತೆರಳಿದನು. ತೆರಳುವ ಮುಂಚೆ 'ಪುತ್ರನ ಪಡೆವುದು ಲೇಸು, ಪುತ್ರಿಯ ಪಡೆವುದು ಹೊಲ್ಲ' ಎಂದೆನ್ನಿಸಿತವರಿಗೆ. ಅಗಲಿಕೆಯ ದುಃಖ ಆವರಿಸಿತು. ಆದರೂ ಸೂತ್ರದ ಗೊಂಬೆಗಳಂತೆ ಸಾಗಿದರು.

ಮುಂದೆ ವರುಷ ವರುಷಕ್ಕೆ ಇದರಂತೆಯೇ ಭರತೇಶನಿಗೆ ಮದುವೆಗಳು ಆಗುತ್ತ ಹೋದುವು. ನಾದನದೇವಿ, ಸುಮುಕರಾಜಿ, ಶ್ರೀದೇವಿ, ಮಕರಾಜಿ, ಚಂದ್ರಿಕಾದೇವಿ ಮೊದಲಾದವರನ್ನು ಆತ ಮದುವೆಯಾದ. ನಾದನದೇವಿ (ಅನಂತಸೇನಾದೇವಿ) ಎಂಬ ಮಗನನ್ನು ಹೆತ್ತಳು. ಹೀಗೆ ಉತ್ಸವದಿಂದ ದಿನಗಳು ಉರುಳುತ್ತ ಇರಲು, ವೃಷಭೇಶನು ಮಗನಿಗೆ ಯುವರಾಜಪಟ್ಟ ಕಟ್ಟಿದನು ಮಂಗಳವು ಹೆಚ್ಚಾಯಿತು. ಭರತೇಶನ ಈ ಶೋಭನವನ್ನು ಸ್ಮರಿಸಿದರೆ ಸುಖವಾಗುವುದು, ಸಿರಿ ಹೆಚ್ಚಾಗುವುದು, ಪುಣ್ಯದೊರೆಯುವುದು, ಜಯವು ಲಭಿಸುವುದು, ಕೊನೆಗೆ ಗುರು ಹಂಸನಾಥನ ಕೃಪೆಯಾಗುವುದು.

## ಪಾತ್ರರಚನೆ

ಕವಿಯು ಪಾತ್ರ ರಚನೆಯಲ್ಲಿ ಚೆನ್ನಾಗಿ ತನ್ನ ಜಾಣ್ಮೆಯನ್ನು ತೋರಿದ್ದಾನೆ. ಭಗವಾನ್ ವೃಷಭದೇವನನ್ನು ಒಂದು ಉನ್ನತ ದೃಷ್ಟಿಯಿಂದ ಕಂಡಿದ್ದಾನೆ. ಉಳಿದ ಅರಸರುಗಳಂತೆ ಆತನಲ್ಲ, ತೀರ್ಥಂಕರ. ಇದನ್ನು ಗಮನಿಸಿ ಅವನನ್ನು ಅಷ್ಟು ಇಷ್ಟು ಮಾತಿಗೆ ನಮ್ಮ ಕಣ್ಣೆದುರಿಗೆ ತಂದು ಓಡಾಡಿಸುವದಿಲ್ಲ. ಮಗನ ಮದುವೆ ಮಾಡುವ ವಿಚಾರ ಬಂದರೂ ಅದನ್ನು ನೆರವೇರಿಸುವುದಕ್ಕೆ ಸೋಮಪ್ರಭನೇ ಮುಂದೆ. ಭರತಚಕ್ರಿಗೆಂದೇ ಹುಟ್ಟಿದ ಹೆಣ್ಣು ಕಿಷ್ಕಿಂಧೆಯಲ್ಲಿದೆ ಎಂಬುದರ ತಿಳಿವು ಆದೀಶನಿಗಿದೆ. ತ್ರಿಲೋಕ ಜ್ಞಾನಿಯಲ್ಲವೆ ಅವನು. ಅದಕ್ಕೆಂದೇ ದಿವಿರಾಜನು ಅಯೋಧ್ಯೆಗೆ ಬಂದ ಕೂಡಲೆ ಆದೀಶನನ್ನು ಕಾಣಲಿಕ್ಕೆ ಬಂದನು. ಬೀಗನನ್ನು ಎದುರುಗೊಳ್ಳಲಿಕ್ಕೂ ಹೋಗದಷ್ಟು ಹಿರಿಯ, ಪೂಜ್ಯ ಆದಿನಾಥ. ಈ ಪಾತ್ರದ ಹಿರಿಮೆಯನ್ನು ಕವಿ ಬಹು ಮನೋಹರವಾಗಿ ಚಿತ್ರಿಸಿದ್ದಾನೆ. ಇದರಂತೆಯೇ ಭರತಚಕ್ರಿಯನ್ನು ರೂಪಿಸುವಲ್ಲಿಯೂ ಕವಿಯ ಕುಂಚ ಸ್ವರಸವಾಗಿ ಆಡಿದೆ. ಭರತ ಬಹು ಗಂಭೀರ ವ್ಯಕ್ತಿ. ತಂದೆ ತಾಯಂದಿರಲ್ಲಿ ತುಂಬ ಗೌರವ ಇಟ್ಟುಕೊಂಡವ. ಮದುವೆಯ ಮಾತನ್ನು ಕೇಳಿ ಒಪ್ಪಿಯೂ ಒಪ್ಪದಂತಿರುವನು. ತಂದೆ ತಾಯಂದಿರೆದುರಿಗೆ ಮಡದಿಯೊಡನೆ ಹೋಗ-ಲಿಕ್ಕೂ ಒಪ್ಪನು. ಇಷ್ಟೇ ಅಲ್ಲ, ಹೆಂಡತಿಯೊಡನೆ, ಮಾತನಾಡದೆ ಅವ-

ದಾಸಿಯಾದ ನಂದಕಿಗೇನೇ ಹಿಂದುಳಿಯುವಂತೆ ಸೂಚಿಸಿ ಮುಂದೆ ಸಾಗುವ ಗಾಂಭೀರ್ಯವನ್ನು ಅವನ ನಡತೆಯಲ್ಲಿ ಕವಿ ತುಂಬಿದ್ದಾನೆ. ಇಷ್ಟಿದ್ದೂ ಜನರೆಲ್ಲ ಅವನನ್ನು ಅನುಸರಿಸುವರು, ಪೂಜಿಸುವರು. ಕಿಷ್ಕಿಂಧೆಯಲ್ಲಿಯ ಊಟ ಆರಂಭವಾಗಬೇಕಾದರೂ ಜನ ಭರತೇಶನನ್ನು ನೆನೆಯಬೇಕು. ಇನ್ನು ದಿವಿರಾಜ ತುಂಬ ವ್ಯವಹಾರವನ್ನು ಬಲ್ಲ ಜೀವಿ. ಯಾವ ನಡೆವಳಿಯಲ್ಲಿಯೂ ತಪ್ಪಿ ನಡೆಯನು. ಅವನ ಮಗಳು ಕುಂತಲಾವತಿಯೂ ಹಾಗೇ ಜಾಣೆ. ಭರತನಿಗೆ ತಕ್ಕ ರಾಣಿ. ಭಾವುಕ ಜೀವಿ. ಸೋಮಪ್ರಭದೇವ ಆದಿನಾಥನ ಗೃಹಮಂತ್ರಿಯಿದ್ದಂತೆ ಎಲ್ಲ ಒಳ ಹೊರಗಿನ ವ್ಯವಹಾರವನ್ನೆಲ್ಲ ಸಮತೂಕವಾಗಿ ನಡೆಯಿಸಿಕೊಂಡು ಹೋಗುತ್ತಾನೆ. ಸರಸ್ವತಿದೇವಿ ಸುನಂದಾದೇವಿಯರಂತೂ ಪತಿಯ ಹೃದಯವನ್ನು ಅರಿತ ಸಾಧ್ವಿಯರು. ಹೀಗೆ ಶೋಭನಸಂಧಿಯಲ್ಲಿ ಬರುವ ಪಾತ್ರಗಳೆಲ್ಲ ಸುಂದರವಾಗಿ ಚಿತ್ರಿಸಲ್ಪಟ್ಟಿವೆ.

## ಕಾವ್ಯಗುಣ

ಕಾವ್ಯವು ದೇಶಕಾಲಾಬಾಧಿತವಾಗಿ ನಿಲ್ಲುವುದು ಅದರಲ್ಲಿರುವ ಕಾವ್ಯಗುಣದಿಂದ. ಈ ಕಾವ್ಯಗುಣವು ಅಂತಃಸತ್ವವನ್ನು ಅವಲಂಬಿಸಿರುತ್ತದೆ. ಇಂಥ ಕಾವ್ಯಜೀವವಂತೂ ಭರತೇಶವೈಭವದಲ್ಲಿ ಎಲ್ಲೆಡೆಗೂ ನೋಡಲಿಕ್ಕೆ ಸಿಕ್ಕುತ್ತದೆ. ಅದರಿಂದಲೇ ಅದು ಲೋಕಪೂಜಿತ ಮಹಾಕಾವ್ಯವಾಗಿದೆ. ಅಂಥ ಮಹಾಕಾವ್ಯದ ಒಂದು ಅಂಗವೆನಿಸಿದ ಈ ಶೋಭನಸಂಧಿಗಳಲ್ಲೂ ಅದೇ ಮಟ್ಟದ ಕಾವ್ಯಸತ್ವವು ಕಂಡುಬರುವುದರಲ್ಲಿ ಸಂಶಯವಿಲ್ಲ,

ರತ್ನಾಕರನಂತೂ ಅಧ್ಯಾತ್ಮಕವಿ. ಧ್ಯಾನಕ್ಕೆ ಬೇಸರಾದಾಗ ಒಂದಿಷ್ಟು ಕಾವ್ಯನುಡಿಯುವವನು. ಅದರಲ್ಲೂ ಕಾವ್ಯನಾಯಕ ಅವನ ಮೆಚ್ಚಿನ ಪುರುಷ. ಮೇಲಾಗಿ 'ಪುದು ಜಿನನೆ ನಿನ್ನೊಳಕಂಡ ಮುಕ್ತಿಪತಿ' ಎಂದು ಹೇಳುವ ಯೋಗಸಾಮರ್ಥ್ಯ ಕವಿಗೆ. ನಿಜದ ನಿಜವಾದ ನೆಲೆಯನ್ನು ತೋರಿಸೆಂದು ನಿರಂಜನ ಸಿದ್ಧನನ್ನು ಬೇಡಿ ಕಾವ್ಯವನ್ನು ಆರಂಭಿಸುವವನು. ಇಂಥ

ಅಂತಃಸತ್ವವುಳ್ಳ ಕವಿಯು ಕಾವ್ಯವನ್ನು ಬರೆಯಬೇಕಾದರೆ ವಸ್ತುವಿನ ಚಿತ್ರವನ್ನು ತನ್ನ ಅಂತರಂಗದಲ್ಲಿ ಮೊದಲು ಮೂಡಿಸಿಕೊಳ್ಳುತ್ತಾನೆ. ಆ ಮೇಲೆ ಅದನ್ನು ನುಡಿಗನ್ನಡಿಯಲ್ಲಿ ಪ್ರತಿಫಲಿಸುತ್ತಾನೆ. ಅದು ಕವಿಯ ಹೃದಯದಿಂದ ಬಂದುದರಿಂದ ನಮ್ಮ ಹೃಧಯವನ್ನು ನೇರವಾಗಿ ಸೇರುತ್ತದೆ. ಮಾದರಿಗಾಗಿ ಒಂದು ಪ್ರಸಂಗವನ್ನು ಇಲ್ಲಿ ನೋಡಬಹುದು. ಕುಂತಳವತಿಯು, ಅಯೋಧ್ಯೆಯಿಂದ ಒಬ್ಬನ ಕಾಗದ ತಕ್ಕೊಂಡು ಬಂದು ತನ್ನನ್ನು ಭರತೇಶನಿಗೆ ಕೊಡಲಿಕ್ಕೆ ಕೇಳಿದುದನ್ನು ಕನಸಿನಲ್ಲಿ ಕಾಣುತ್ತಾಳೆ. ಇದನ್ನು 'ಪರರೊಡನೆ ನುಡಿವುದಕೆ ಕರ ನಾಣ್ಚಬೇಕಕ್ಕ' ಎಂದು ಆತ್ಮೀಯ ಗೆಳತಿಯ ಮುಂದೆ ಹೇಳುವ ಮೊದಲು ಪ್ರಸ್ತಾಪಿಸುತ್ತಾಳೆ. ಆಗ ಆ ಗೆಳತಿ ಹೇಳುವ ಮಾತುಗಳನ್ನು ಕೇಳಿ,

ನನ್ನ ಕಿವಿಯಲ್ಲದೆ ನಾನನ್ಯರಿಗರುಹಿದರೆ ।
ನಿನ್ನಾಣೆ ನನ್ನ ಮನದಲ್ಲಿ । ಭರತೇಶನ ।
ಚೆನ್ನಡಿಗಳಾಣೆ ನುಡಿಯಮ್ಮ........

ಇಲ್ಲಿ ಎಂಥ ಹೃದ್ಯವಾಗಿದೆ ಕಾವ್ಯ ! ಕವಿಗೆ ಪ್ರಪಂಚದ ಜ್ಞಾನವೆಷ್ಟು! ಮಾನವ ಸ್ವಭಾವದ ಪರಿಚಯು ಎಷ್ಟು ಆಳವಾಗಿದೆ? ಅವಳ ಮಾತಿನಲ್ಲಿ ತನ್ನ ಕಿವಿಗಳೂ ಕೂಡ ತನ್ನಿಂದ ಬೇರೆ ಎನ್ನುವ ಧ್ವನಿಯಲ್ಲಿರುವ ಸಾಮರ್ಥ್ಯ ಎಂಥದು? ಇಂಥ ಧ್ವನಿಶಕ್ತಿಯಿಂದಲೇ ಕಾವ್ಯಲೋಕವನ್ನು ಬೆಳಗುವದಲ್ಲವೆ? ಇಂಥ ಅಮೌಲ್ಯ ಭಾವಸೃಷ್ಟಿಯಲ್ಲದೆ ಈ ಕವಿಯಲ್ಲಿ ಕಲ್ಪಕತೆಯನ್ನೂ ಸ್ಪಷ್ಟ ಚಿತ್ರಣಶಕ್ತಿಯನ್ನೂ ಕೂಡ ನಾವು ಬಹಳ ಕಾಣುತ್ತೇವೆ. ಕೆಳಗಿನ ಭರತೇಶನ ಚಿತ್ರವನ್ನು ಕಾಣಿರಿ.

ಮುತ್ತಿದ ತನು ಪರಿಮಳಕೆ ಒತ್ತರಿಸಿ ತುಂಬಿಗಳು ।
ಸುತ್ತಿ ಮೇಲಾಡಿ ಸುಳಿವಾಗ । ಪೀಲಿಯ ।
ಸತ್ತಿಗೆಯೆತ್ತಿಯ ನಡೆವಂತೆ .......

ನವಿಲು ತನ್ನ ಗರಿಗೆದರಿ ನಡೆಯುವಂತೆ ಇತ್ತಂತೆ ಆ ಚಿತ್ರ ! ಭರತೇಶನ ಮೈಯ ತಂಪಿಗೆ ತುಂಬಿಗಳು ಸುತ್ತಿ ಮೇಲೆ ಆಡುವ-ಹಾರಾಡುವ-

ಆ ನೋಟ! ಇಲ್ಲಿ ಕವಿಯ ಕಲ್ಪಕತೆ ಎಷ್ಟು ಅಗಾಧ! ಚಿತ್ರಣ ಶಕ್ತಿ ಎಂಥ ಅದ್ಭುತ!

ಇನ್ನು 'ನುಡಿದುದುತ್ತಮ ಲೇಸು ಬೇಡ್ವುದೊಳಿತು ಸಂತೋಷ' ಎನ್ನುವಲ್ಲಿ ತೋರುವ ಮಾತಿನ ರೀತಿ, 'ಹುಟ್ಟಿದಂದೆ ಹೆಣ್ಣು ಕೊಟ್ಟದ್ದು ದಾತನಿಗೆ' ಎಂಬಲ್ಲಿಯ ಸ್ಪಷ್ಟತೆ, 'ದೇವರಿಗೊಂದು ಹೂವನೊಯ್ವರಂತೆ' ಭರತನಿಗೊಂದು ಹೆಣ್ಣು ಒಯ್ಯುವ ರೀತಿಯೊಳಗಿನ ಭಕ್ತಿ ಭಾವುಕತೆ ಗಳನ್ನು ಯಾರೂ ಮೆಚ್ಚುವಂತೆ ಕವಿ ಚಿತ್ರಿಸಿದ್ದಾನೆ. ಇವೆಲ್ಲ ಕಾವ್ಯ ಗುಣಗಳಿಂದ ಈ 'ಶೋಭನ ಸಂಧಿಗಳು' ಭರತೇಶ ವೈಭವ ಕಾವ್ಯಕ್ಕೆ ಭೂಷಣಪ್ರಾಯವಾಗಿಯೇ ನಿಲ್ಲುತ್ತವೆಂಬುದರಲ್ಲಿ ಸಂಶಯವಿಲ್ಲ. ಆದರಿಂದ ಈ ವಿಷಯದಲ್ಲಿ ಕನ್ನಡ ಸಂಶೋಧಕರು ತಮ್ಮ ಮನಸ್ಸನ್ನು ಹಾಕಬೇಕೆಂದು ಬೇಡಿಕೊಳ್ಳುತ್ತೇನೆ.

ಈ ಶೋಭನ ಸಂಧಿಗಳ ಸಂಪಾದನೆಯ ಕಾರ್ಯದಲ್ಲಿ ಅನೇಕ ಉಪ ಯುಕ್ತ ಸಲಹೆ ಸೂಚನೆಗಳನ್ನಿತ್ತು ಸಹಕರಿಸಿದ ಶ್ರೀ ಬೆಟಗೇರಿ ಕೃಷ್ಣಶರ್ಮ ರಿಗೂ ಮತ್ತು ಹೊತ್ತಿಗೆ ಸರಿಯಾಗಿ ಮುದ್ರಿಸಿಕೊಟ್ಟ ಶ್ರೀ ಹೊಸಕೇರಿ ಯವರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಉಗಾರ
೧೨—೧—೧೯೫೧

ಮಿರ್ಜಿ ಅಣ್ಣಾರಾಯ



# ಪರಿವಿಡಿ

卐



ಸೌ. ಕೃಷ್ಣಾಬಾಯಿ ಭ್ರ. ಪಾಸಗೌಡ ಪಾಟೀಲ ಉಗಾರ



ಶ್ರೀ. ಪಾಸಗೌಡಾ ಅಪ್ಪಾಗೌಡಾ ಪಾಟೀಲ ಉಗಾರ

# ಭರತೇಶ ವೈಭವ

## ಶೋಭನ ಸಂಧಿಗಳು

●

### ಪ್ರಥಮ ಕಲ್ಯಾಣದ ಶೋಭನ ಸಂಧಿ

ಭರತ ಚಕ್ರೇಶ್ವರನಿಗೆ ಪರಿಪೂರ್ಣ ಸುಖವಿತ್ತ ।
ಪರಮ ಮಂಗಲನೆ ಪರಮಾತ್ಮ । ಪರಬೊಮ್ಮ ।
ಗುರು ಹಂಸನಾಥ ಮತಿದೋರು ॥ ಶೋಭನ * ॥ ೧ ॥

ಸುರನರೋರಗ ರಂಗ ಪುರಸೋಂಕದೆ ।
ವರ ಮುಕ್ತಿಯೊಡನೆ ಬೆರಸಿದ । ನಿಚ್ಚಸಿಂ- ।
ಗರ ಹಂಸನಾಥ ನೀ ಮತಿದೋರು ॥ ೨ ॥

ರತ್ನತ್ರಯ ಮಯಬೋಧ ರತ್ನಪ್ರಕಾಶನೆ ।
ರತ್ನಾಕರಸಿದ್ಧ ನೆನ್ನೊಡೆಯನೆ । ತ್ರಿಭುವನ ।
ರತ್ನಾಕರ ಹಂಸ ಜಯಜಯ ॥ ೩ ॥

ಪರಮಾರ್ಥಗಳು ಬೇಕು ಹರ ಚಿದಂಬರ ಪುರುಷ ।
ಸುರಸಿದ್ಧ ಯಕ್ಷ ಖಗವಂದ್ಯ । ಪುರುಜನನೆ ।
ನೆರೆಯೆನ್ನೊಳಕಂಡ ಮುಕ್ತಿ ಪತಿಯಂತ ॥ ೪ ॥

---

* ಪ್ರತಿಪದ್ಯದ ಕೊನೆಯಲ್ಲೂ 'ಶೋಭನ' ಎಂದು ಹಾಡಬೇಕು.

ಗುಂಜಾಭರಣದಿಳಿಗೆ ಕಂಜಪ್ರಿಯ ತೋರ್ಪಂತೆ ।
ರಂಜಿಸುವರು ದರುಶನಕೆ । ಮೆರೆವ ನಿ- ।
ರಂಜನ ಸಿದ್ಧ ನಿಜದೋರು ॥ ೫ ॥

ಕೃತಯುಗದಾದಿಯಲ್ಲಿ ಕ್ಷಿತಿ [ ಯ ] ಯೋಧ್ಯನಗರಿಯಲ್ಲಿ ।
ಅತಿಶಯವಡೆದು ಮೆರೆದಿಹುದು । ಶಕ್ರವಂ ।
ದಿತ ವೃಷಭೇಶನಾಥನದನಾಳ್ವ ॥ ೬ ॥

ಪುರುನಾಥ ತೀರ್ಥೇಶ ಪುರುಷರಮೇಶ್ವರ ।
ಧರೆಗಾದಿಬ್ರಹ್ಮ ವೃಷಭೇಶ । ನೆಂದಿಂತು ।
ಕರೆವರಾಪಿಭುವ ಸುರರೆಲ್ಲ ॥ ೭ ॥

ಘನವಜ್ರಮಯದೇಹ ಕನಕಸನ್ನಿಭವರ್ಣ ।
ವಿನುತ ಸುಜ್ಞಾನಿ ಸಿವಾಗಾಮಿ । ಲೋಕ ಜೀ- ।
ಯೆನೆ ಬಾಳುತಿರ್ದ ವಸುಧೆಯ ॥ ೮ ॥

ಧರೆಗೆ ರಂಜಿನೆ ಗಾತ್ರ ಸುರರನ್ನ ಪಾನವ ।
ನೆರೆಪನುಂಡುಟ್ಟು ಸುಖಬಾಳ್ವ । ನಾತನಾ ।
ಸಿರಿಗೆಣೆಯಿಲ್ಲ ಜಗದಲ್ಲಿ ॥ ೯ ॥

ಮೆರೆಯೆ ಸರಸ್ವತಿದೇವಿ ನೆರೆಸುನಂದಾದೇವಿ ।
ಮೆರೆವರಾವಿಭುಗರಸಿಯರು । ಪತಿಭಯಕೆ ।
ಅರಸಿಯರಿಬ್ಬರಿಗೆ ಹುರುಡಿಲ್ಲ ॥ ೧೦ ॥

ಹಿರಿಯಾಕೆ ನೂರೊಂದು ವರಶಿಶುವ ಪಡೆದಳು ।
ಎರಡೇನೆ ಶಿಶುವಹವು ನಿನಗೆಂದು । ಕಿರಿಯಾಕೆ ।
ಗೊರೆದಾದಿಬ್ರಹ್ಮ ಸುಖಬಾಳ್ವ ॥ ೧೧ ॥

ಲಕ್ಷ ಯೆಂಭತ್ತುನಾಲ್ಕು ಲಕ್ಷ ಪೂರ್ವಾಯುಷ್ಯ ।
ಸುಕ್ಷೇತ್ರದಲ್ಲಿ ಸುಖವಿತ್ತು । ಇದ್ದನು ಮುಂಪೆ ।
ಮೋಕ್ಷಕ್ಕೆಯ್ದುವನು ಮುನಿಯೋಗಿ ॥ ೧೨ ॥

ಇರಲು ಸರಸ್ವತಿದೇವಿ ತರಳನ ಪೆತ್ತಳು ।
ಭರತ ಭೂತಳವನಿವನಾಳ್ವನೆಂದಯ್ಯಾ ।
ಭರತೇಶನೆಂದು ಪೆಸರಿಟ್ಟ ॥ ೧೩ ॥

ಮತ್ತಾ ಕಂದನ ಹಿಂದೆ ಹತ್ತು ವರುಷದ ಮೇಲೆ ।
ಹೆತ್ತಳಾದೇವಿ ಕುವರನ । ವೃಷಭೇಶ (?) ।
ನುತ್ತಮನೆಂದು ಹೆಸರಾಯ್ತು ॥ ೧೪ ॥

ಕಿರಿಯನಿಗೆಂಟು ವರುಷ ನೆರೆವಾಗ ಹಿರಿಯನಿಗೆ ।
ನೆರೆದವು ಪ್ರಾಯ ಹದಿನೆಂಟು । ಪ್ರಾಯದಾ ।
ಮುರುಕ ಮೋಹಿಸಿತು ಭೂವರಗೆ ॥ ೧೫ ॥

ದರ್ಪವೇರಿತು ದೇಹ ಕಪ್ಪುದೋರಿತು ಪನ್ನೆ ।
ತುಪ್ಪುಳು ಮೀಸೆ ನೆರೆದವು । ಭರತೇಶ ।
ಗೊಪ್ಪಿತು ಹೊಚ್ಚ ಹೊಸಪ್ರಾಯ ॥ ೧೬ ॥

ಮುದ್ದುಮೊಗದ ಕಾಂತಿ ತಿದ್ದಿದ ಬೆಳುಗುರು ।
ಇದ್ದ ಸಿರಿದುರುಬು ನಿಡುಚುಂಗು । ಚಿಮ್ಮುರಿ ।
ಪುರ್ದಿಸುತಿಹುದು ಮದನನ ॥ ೧೭ ॥

ನಗೆಮೊಗದ ಸಂಪಿಗೆಯ ಮುಗುಳಂದದ ನಾಸಿಕದ ।
ಬೊಗಸೆಗಣ್ಣೆಸೆಯೆ ನಿಡುಹುಬ್ಬು । ಭರತೇಶ ।
ನಗುತಿದ್ದ ಸುರರ ಸೊಬಗನು ॥ ೧೮ ॥

ತಿರುಪುವೆತ್ತಿದೆ ಬಟ್ಟ ಹೊರವಾರು ನಿಡುದೋಳು ।
ಕಿರುನಡು ಕಂಬದೊಡೆಗಳು । ಪಾವುಗೆವೆಜ್ಜೆ ।
ಮೆರೆದವು ನೃಪಗೆ ಸೊಬಗಾಗಿ ॥ ೧೯ ॥

ಮಿಸುನಿವಂಗದ ಮೈಗೆ ಹೊಸಪ್ರಾಯವೇರಲು ।
ರಸಿಕ ಸಿಂಗರಿಸಿ ಸುಳಿವಾಗ । ಜಗವಶೋ- ।
ಭಿಸುತಿದ್ದ ತನ್ನ ಚಲುವಿಂದ ॥ ೨೦ ॥

ಹೊತ್ತರಿಂದು ಸಿಂಗರಿಸಿ ಮತ್ತೆ ದೊರೆ ಮೋಡಿಯಲ್ಲಿ ।
ಸುತ್ತ ಸೇವಕರು ಕೆಳೆಯರು | ಬರಲು ಸಂ– ।
ಪತ್ತಾಗಿ ಸುಳಿವ ಪುರದಲ್ಲಿ ॥ ೨೧ ॥

ಗಿಂಡಿ ಹಡಪ ಕುಂಚ ಕಂಡಿಯು ಕಿರಿಸಿ ।
ಕೊಂಡು ಸೇವಕರು ಬಳಿಸಾರೆ । ರಾಜ ಮಾ– ।
ರ್ತಂಡ ನಡೆವನು ನಟನೆಯಲ್ಲಿ ॥ ೨೨ ॥

ಅನುಕೂಲದಕ್ಷಣನು ಘನಪೀಠವರ್ಧಕನು ।
ಅಲಘುನಾಗರನು ಮೊದಲಾದ । ಕೆಳೆಯರ ।
ಬಿನದದಲ್ಲಿದ್ದು ನಡೆವ ಬೆಡಗಾಗಿ ॥ ೨೩ ॥

ಬಿಳಿಯ ಸತ್ತಿಗೆಯೆತ್ತಿ ಸುಳಿವ ಚಾಮರದಿಂದ ।
ಹೊಳೆವ ಹಾವುಗೆಯ ಮಿಗೆ ಮೆಟ್ಟಿ । ಪಾಠಕರ ।
ಗಲಭೆಯಲ್ಲಿ ನಡೆವಾಗ [ಯ]ಮುಕದಲ್ಲಿ ॥ ೨೪ ॥

ಮುತ್ತಿದ ತನು ಪರಿಮಳಕೆ ಒತ್ತರಿಸಿ ತುಂಬಿಗಳು ।
ಸುತ್ತಿ ಮೇಲಾಡಿ ಸುಳಿವಾಗ । ಪೀಲಿಯ ।
ಸತ್ತಿಗೆಯೆತ್ತಿ ನಡೆವಂತೆ ॥ ೨೫ ॥

ಅಂದಳ ಪಲ್ಲಕ್ಕಿಯಲ್ಲಿ ನಿಂದಗಜ ತೇಜಿಯಲ್ಲಿ ।
ಒಂದೊಂದು ದಿನಕೆ ಹೊಸತಾಗಿ । ವಾದ್ಯ ಭೋ– ।
ರೆಂದೆನಲು ಮೇಳ ಮೆರೆವನು ॥ ೨೬ ॥

ಪಾಡುವ ಪಾಠಕರ ಕೈಮುಗಿವ ಪುರಜನಗಳ ।
ಬಗೆಯರಿಂದು ನುಡಿವ ಕವಿಗಳ । ಆಲಿಸುತ ।
ನಗುತ ಕುಮಾರ ನಡೆವನು ॥ ೨೭ ॥

ಪುಂಡಪೋಕರ ಕೂಡ ಖಂಡಣಾಟವ ನೋಡ ।
ಕೊಂಡೆಯರ ಕೂಡಿ ನಡೆದಾಡ । ಪ್ರಾಪ್ತರ ।
ತಂಡದಲ್ಲಿ ಹೊತ್ತುಗಳೆವನು ॥ ೨೮ ॥

ನವಪ್ರಾಯವಹುದಲ್ಲಿ ಕುಟಿಲ ಚೇಷ್ಟೆಗಳಿಲ್ಲ ।
ಸುವಿವೇಕದ ಸುಮನದಲ್ಲಿ । ತದ್ಭವ [ ಮೋಕ್ಷ] ।
ಗಾಮಿ ಹೊಗಳಲರಿಯನು ॥ ೨೯ ॥

ಅಗೊ ! ಬರುತ್ತಿದ್ದನೆಂಬುದ ಕೇಳಿ ಪುರಸತಿಯರು ।
ಮುಗಿಲ ಮಾಡಗಳ ಪರಿದೇರಿ । ನೋಡಲೊಡನೆ ।
ಹೋಗುವ ನೋಡ ನವರತ್ನ ॥ ೩೦ ॥

ಬೆಲೆವೆಂಗಳಿದಿರೆಯ್ದಿ ನಲಿದು ಕೈಮುಗಿಯಲು ।
ಸಲೆ ಸೋತು ನೋಡಾ ಸತಿಯರು । ಮನುವಂಶ ।
ತಿಲಕ ಕುಮಾರಗೆಣೆಯುಂಟೆ ॥ ೩೧ ॥

ಪರಸತಿ ಸೋದರಿ ಪರಚೇಜ (?) ವಾರಸ್ತ್ರೀ ।
ವಿರತ ಭಾಪೆಂದು ಪೊಗಳಿಸುವ । ನಿಜಕುಲದ ।
ಬಿರುದ ಪಾಲಿಸುತ ನಡೆವನು ॥ ೩೨ ॥

ಒಂದು ದಿನ ಭಕ್ತಿಯಲಿ ಬಂದು ಕಾಣಿಕೆಯಿಕ್ಕಿ ।
ತಂದೆಯ ಪಾದಕ್ಕೆರಗಿಪನು । ಕೆಲದಲ್ಲಿ ।
ನಿಂದನೋಜೆಯಲಿ ಭರತೇಶ ॥ ೩೩ ॥

ಇನಿಸು ಹೊತ್ತಿನ ಮೇಲೆ ಜನಕ ಕುಳಿರಕೊಡಿಸೆ ।
ಮನವೊಲಿದು ಕುಳಿತ ಭರತೇಶ । ಸಭೆಗೊಂದು ।
ಘನತರದ ಭಾಗ್ಯ ನೆರೆದಂತೆ ॥ ೩೪ ॥

ನೋಡಿದನು ಪುತ್ರನ ಗಾಡಿಯ ವೃಷಭೇಶ ।
ಪಾಡಾಯ್ತು ಮಗನಿಗೆ ಹೊಸಪ್ರಾಯ । ಮದುವೆಯ ।
ಮಾಡಬೇಕೆಂದು ನೆನೆದನು ॥ ೩೫ ॥

ಪರಿಯಲೋಲಗವೆಂದು ನೆರೆದರೆಲ್ಲರ ಕಳುಹಿ ।
ಪುರುನಾಥ ಮಗನ ಕಳುಹಿದನು । ಕೂಡಿ ತ— ।
ನ್ನರಮನೆಗೆಯ್ದಿ ಕುಳಿತನು ॥ ೩೬ ॥

ಅರಸಿಯರಿಬ್ಬರು ಪೊರಗೆಯ್ದಲವರೊಡನೆ |
ಪರಮೇಶ ತಾನು ನೆನೆದಿರ್ದ | ಕಾರ್ಯವ |
ಹೆರುಷದಿಂದಿಂತು ನುಡಿದನು || ೩೬ ||

ಹಿರಿಯಾಕೆ ಸರಸ್ವತಿದೇವಿ ಕಿರಿಯಬಾಲೆ ಸುನಂದಾದೇವಿ ।
ನೆರೆದಿರ್ದನತ್ತ ಭರತೇಶ । ಮದುವೆಯ ನಿ- |
ನ್ನರಿ ನಾನು ಮಾಡುವೆ ನಿವಾಂದಾ * । ೩೮ ||

ಹರೆಯವಾಯ್ತುಹುದಲ್ಲಿ ಪರವಶದ ನಡೆಯಿಲ್ಲ ।
ಗರುವಿಕೆ ಗುಣವಿನಿತಿಲ್ಲ | ವೆಂದಾಮಗನ |
ಚರಿತಕೆ ಬೀಗಿ ನುಡಿದನು || ೩೯ ||

ಕಾತರದ ನುಡಿಯಿಲ್ಲ ಕಾತರದ ನಡೆಯಿಲ್ಲ |
ಜಾತಿ ಶೀಲದಲ್ಲಿ ನಡೆವನೆಂ । ದಾ ಮಗನ ।
ನೀತಿಗೆ ಮೆಚ್ಚಿ ನುಡಿದನು || ೪೦ ||

ಆರು ಸೊಕ್ಕರು ಮುನ್ನ ನೆರೆದ ಪ್ರಾಯದಲ್ಲಿ ।
ಆರಯ್ದು ನಡೆವನಿವನೆಂದು । ಮಗನ ಗಂ- |
ಭೀರಕೆ ಹೊಗಳಿದ ಸತಿಯರು (?) || ೪೧ ||

ಆರು ಖಂಡದ ತೊಂಭತ್ತಾರು ಸಾವಿರ ಹೆಣ್ಣ ।
ಪಿರಿದು ಮುಂದಾಗಿ ಕಡೆಯಲ್ಲಿ । ವರಮುಕ್ತಿ ।
ಗೇರುವ ನೀತ ಕಡೆಯಲ್ಲಿ || ೪೨ ||

ಬಹು ಪುತ್ರರಿನ್ನು ಮುಂದಹುದಹುದು ನಿಮಗಿಲ್ಲಿ ।
ಬಹು ಚಿಂತೆ ಬಹುದು ಕಡೆಗೆ । ತಾನೊಬ್ಬನು ।
ತ್ಸಹ ಮಾಡಬೇಕು ನಿಮಗೆಂದ || ೪೩ ||

ನಿಮಗೆ ಸಂತಸ ಮಾಳ್ಪ ನಮಗೆ ಕೀರ್ತಿಯ ಮಾಳ್ಪ ।
ದಿವಿಜರ ಮೆಚ್ಚಾಗಿ ಸ್ಥಿರ ಬಾಳ್ವ ನೆಂದಾದಿ- |
ಶಿವ ತನ್ನ ಮಗನ ಪೊಗಳಿದನು || ೪೪ ||

* ನಿವನ

ನಂದನನ ಗುಣಕವರ ಮುಂದೊತ್ತಿ ವಸವಾಳಾ (?) ।
ನೊಂದೆ ಬಣ್ಣಿಪುದು ಮತವೆಂದು । ಮಗನಾ ।
ತಂದೆ ಬಣ್ಣಿಸಿದ ಸತಿಯರೊಳು ॥ ೪೫ ॥

ದೇವರ ಸುತರೊಳಗ ದೇವರೆ ಬಲ್ಲಿರೆ ।
ನಾವೇನು ಬಲ್ಲೇವು ಬಾಲೆಯರು । ಎಂದರು ।
ದೇವಿಯರು ನಗುತ ಮನವೊಗ್ಗಿ ॥ ೪೬ ॥

ಸ್ವಾಮೀ ! ಈತಗೆ ತಕ್ಕ ಕಾಮಿನಿಯೆಲ್ಲುಂಟು ।
ನೇಮಿಸಬೇಕು ನಮಗೆಂದ [ರು] । ಭಕ್ತಿಯಲಿ ।
ಕೈಮುಗಿದ ರಾಯನರಸಿಯರು ॥ ೪೭ ॥

ಸಿರಿವೆತ್ತ ಕಿಕ್ಕಿಂದ ಪುರದಲ್ಲಿ ಕರ್ನಾಟಕ ।
ವರದೇಶದಲ್ಲಿ ದಿವಿರಾಜ । ನುಂಟವಗೆ ।
ಸುರದೇವಿಯೆಂಬ ಸತಿಯೊಂದು ॥ ೪೮ ॥

ಭಾನುರಾಜ [ನ] ಪೆತ್ತು ಜಿನಮಂಗಲ ಮಾಡಿ ।
ಸಾನುರಾಗದಲಿರುತಿಹರು । ಮುಂದೆ ಸಂ- ।
ತಾನ ವೃದ್ಧಿಯನು ಬಯಸುತ ॥ ೪೯ ॥

ಹುಟ್ಟಿತವರಿಗೊಂದು ಕಟ್ಟಾಣಿ ಪೆಣ್ಣಾಗ ।
ಕುಟ್ಟಿ ಭೇರಿಯ ದನಿ ಮೊಳಗೆ । ವಿಸ್ಮಯ- ।
ಬಟ್ಟು ಕೇಳಿದರು ಶಕುನಿಗರ ॥ ೫೦ ॥

ಇವಳು ಚಕ್ರೇಶ್ವರಗೆ ಯುವತಿಯಾಗುವಳೆಂದು ।
ವಿವರವ [ರಿಸೆ] ದೊರೆ ಶಕುನಿಗರು । ಸುರದೇವಿ ।
ದಿವಿರಾಜಗಾಯ್ತು ಕಡು ಹರುಷ ॥ ೫೧ ॥

ಕುಂತಳವತಿಯೆಂದು ಸಂತಸದಿ ಹೆಸರಿಟ್ಟು ।
ಕಾಂತೆಯ ಸಲಹಲವಳಿಗೆ । ಹರೆಯುಸೊಂ- ।
ಪಾಂತೊಪ್ಪಿದಳು ಸೊಬಗಾಗಿ ॥ ೫೨ ॥

ಹದಿನೆಂಟು ವರುಷವು ಸುದತಿಗಾಯ್ತವನಿಗೆ |
ಹದಿನೆಂಟು ತುಂಬಿ ನಡೆವಬ್ದ | ವಿಬ್ಬರಿಗೆ |
ಮದುವೆಯ ಕಾಲ ಸೊಬಗೆಂದ || ೪೩ ||

ಕೀರ್ತಿಯಿ [ಯೊ] ಳೊಬ್ಬರ್ಕ ಕೀರ್ತಿಯೆಂಬಣುಗನ |
ಕೂರ್ತಾಕೆ ಮುಂದೆ ಪಡೆವಳು | ಎನಲು ತಾ- |
ವರ್ತಿ ಮಾಡಿದರು ಸತಿಯರು || ೪೪ ||

ಹೆಣ್ಣೊಂದು ಮುಂದೆ ನಿಮ್ಮಣ್ಣನೋಳ್ಜನಿಸುವುದು |
ಬಣ್ಣಿಸಿ ಮದುವೆಯಹುದಿವಗೆ | ಮತ್ತೀಳೆ |
ಹೆಣ್ಣುಗಳ ಹಲವು ತಹೆನೆಂದ || ೪೫ ||

ತನ್ನ ತಾ ಹಲಬರು ಕನ್ನೆಯರಹುದು |
ನನ್ನನು ಮತದಿ ಕೆಲರ | ತಹೆನಿವನು |
ಮನ್ನಿಸುವೆನೊಮ್ಮೆ ಮೊದಲೆಂದ || ೪೬

ನುಡಿಯೋಲಾದಿನ ಹೋಯ್ತು ಒಡನೆದ್ದು ಮರುದಿನ |
ನಡುವಣೋಲಗದೊಳಿರುತಿದ್ದು | ಮುಗನನ ಸಂ |
ಗಡಿಗರ ಕೈಯ ಕರೆಸಿದನು || ೪೭ ||

ನಾಗರಿಕರ ಕುಲವೆಲ್ಲ ಲಾಲಿಸಿರೈ * |
ಈಗ ನಿಮ್ಮರಸಿಗನು ವರನಿದ್ದು | ಮದುವೆಗು- |
ದ್ಯೋಗಿಸಿದೆವೆಂದ ವೃಷಭೇಶ || ೪೮

ಕೇಳು [ಳಿ] ತನುಜರು ಹೋಗುವ ಬೆಸನೆಂದು |
ಲೋಲನಿರೂಪ ಮತ್ತಿಂದು | ನಿವಾಳಿಯ |
ನಿಟ್ಟು ಮತ್ತವನಿಗೆರಗಿದರು || ೪೯ ||

ಹೋಗಿ ನಿಮ್ಮೊಡೆಯಂಗೆ ತಿಳುಪಿ [ಪೇ] ಳ್ವೊಳಗರಿದು |
ಬೇಗದಿ ನೀವು ಬಹುದೆನಲು | ಕೈಮುಗಿದು |
ಲಾಲಿಸುತ ಹೋದರವರತ್ತ || ೫೦ ||

---

* ನಾಗರಕಿಳನು ಕುಲಮೆಗೆಲ್ಲ ಲಾಲಿಸಿರೈ |

ನಗೆ ಹೆಚ್ಚಿ ಬಹ ಸಖರ ಬಗೆಯೇನೆಂದೆನುತ ।
ನಗುತಿದ್ದನಾಗ ಭರತೇಶ । ಸಾರಿ ಕೈ– ।
ಮುಗಿದ [ರು] ರಸಿಕರು ಗೆಲವಿಂದ ॥ ೬೧ ॥

ಏನಿರೈ ನಿಮಗೆ ಸುವ್ಮ್ಮಾನ ಹೆಚ್ಚಿದೆಯೆಂದು ।
ತಾನವರ ಕೇಳ್ದ ಭರತೇಶ । ನದಕೆ ।
ಮತ್ತವರು ಇಂತೆಂದು ನುಡಿದರು ॥ ೬೨ ॥

ಒಡೆಯಗುತ್ಸಹವಾಹಾಗ ಒಡನಿರ್ದಸರ್ವರಿಗೆ ।
ಒಡನು [ಲು]ಬ್ಬದಿಹದೆ ಎಲೆ ಸ್ವಾಮಿ । ಎಂದಿಂತು ।
ನುಡಿದತ್ತ ಸಖರು ಹೊರಸಾರಿ ॥ ೬೩ ॥

ಅವಸರವೇಕೀಗ ನಮಗೊಂದು ಗರುಡಿಯಲ್ಲಿ ।
ಸವೆಯಲಿ ಕೆಲವು ದಿನವೆಂದು । ಗಂಭೀರ ।
ರವದಿಂದ ನುಡಿದ ಕುವರ ॥ ೬೪ ॥

ಒಂದು ವರುಷದ ಮುನ್ನ ಕಡಿಮೆಯಿಲ್ಲ ।
ಈ ದಿವ್ಯ ಪ್ರಾಯದೊಳಗೊಪ್ಪು [ವ] । ಮದುವೆಗೆಂ ।
ವಾದರಿಸಿ ದರಸಿದರು * ಕೆ [ಳೆ] ಯರು ॥ ೬೫ ॥

ನಾಕೆಂಟು ಕಾಲವನು ನೂಕಿ ನೀವೆಂದಂತೆ ।
ಈ ಕಾರ್ಯಕೊಪ್ಪಿ ನಿಲುವೆನು । ವೆಂದೊಡನೆ ।
ಬೇಕಾಗಿ † ನುಡಿದ ಕೆಳೆಯರೊಳು ॥ ೬೬ ॥

ಅರಿದಾತನದೊಲವು ಮೆರೆವ ಗಂಭೀರವನು ।
ನೆರೆ ಜಾಣರೆತ್ತಿ ಕೆಳೆಯರು । ತಾವೊಂದು ।
ತೆರದಲ್ಲಿ ನಿಲಿಸಿ ನುಡಿದರು ॥ ೬೭ ॥

ಜನಕನೊಂದರ್ತಿಯನು ನೆನೆದು ಮಾಡುವದೆನಲು ।
ತನುಜನುತ್ತರವ ಕೊಡಸಲ್ಲ । ವೆನಲದಕೆ ।
ಮನುವಂಶತಿಲಕ ನೊಡಂಬಟ್ಟ ॥ ೬೮ ॥

---

* ಅರುಹಿದರು † ಪಾರಕಾಗಿ

ಒಡಂಬಡಿಸಿ ಬಂದವರು ಒಡನಾಡೆ ಬ್ರಹ್ಮನಿಗೆ ।
ನುಡಿಯಲಾಸ್ಥಿತಿಯ ಬಗೆದೋರಿ । ಮತ್ತವ ।
ಗುಡುಗೊರೆಯನಿತ್ತು ಕಳುಹಿದನು ॥ ೬೯ ॥

ಕುರುವಂಶತಿಲಕನ ಕರಸೋಮ ಪ್ರಭನ ।
ಭರತೇಶಗಿನ್ನು ಮದುವೆಯ | ಮಾಳ್ಪದು |
ಬಿಡಗಲ್ತಿ ಎಂದ ವೃಷಭೇಶ ॥ ೭೦ ॥

ನೆರೆದರು ಮದುವೆಗೆ ಹೊರಗೆಯೆಲ್ಲರು ಸ್ವಾಮಿ ।
ಹರಿಹಂದರವಿಕ್ಕಿ ಮದುವೆಯ । ಮಾಡಿನ್ನು ।
ಕುರಿತ ಮೇಲೇಕೆ ತಡವೆಂದ ॥ ೭೧ ॥

ದಿವಿರಾಜನೂರಿಗೆ ಸುವಿವೇಕಿ ನೀನೆಯ್ದು ।
ಅವನ ಪುತ್ರಿಯ ಮಿಗೆ ಬೇಡಿ । ತಂದರೆ ।
ನ [ನಾವು] ಮಾಳ್ಪದೆಂದ ವೃಷಭೇಶ ॥ ೭೨ ॥

ಆಗಲಿ ನಾಳೆ ಹೋಗಿ ಬೇಡುವೆನೆನಲು ।
ಆಗಮಿ ಕೇಳ್ದು ನೆರೆ ಪೇಳ್ದು । ಪಯಣಕು- ।
ದ್ಯೋಗ ಮಾಡಿಸಿದ ವೃಷಭೇಶ ॥ ೭೩ ॥

ಅರಸು ಮಕ್ಕಳ ಬುಧರ ಕರಣಿಕರ ಮಂತ್ರಿಗಳ ।
ಪರಿವಾರ ವಾದ್ಯ ಗಜತೇಜಿ । ಮೊದಲಾಗಿ ।
ನೆರಹಿ ಕೊಟ್ಟವನ ನಡೆಯೆಂದ ॥ ೭೪ ॥

ಮುಂದೆ ಸೂಚನೆಗೊಬ್ಬ ಮುಂದೆಯ್ದುತಿರಲಲ್ಲಿ ।
ಹಿಂದೊಯ್ಯನೆಯ್ದು ಗಮಕದಲ್ಲಿ । ಯೆಂದು ಮು- ।
ತ್ತೊಂದು ಮೋಡಿಯನು ನೆನೆದನು ॥ ೭೫ ॥

ಮಡುಗೋಲೆ ಲೇಖನವ ಕಡುಬೇಗದಾಳುಗಳು ।
ಗಡಣಿಸಿ ತೇಜಿ ತಳೆದಟ್ಟಿ । ವೂ [ಯೂ] ಜಿತನೆಂಬ ।
ಕಡುಹಿತವ ಮುಂದೆ ತೆರಳಿದನು ॥ ೭೬ ॥

ಆದಾ [ದ] ರದೊಳವ ಮುಂದೆ ಹಾದಿ ಮೆಟ್ಟಲು ಹಿಂದೆ ।
ನಾದವಾದ್ಯದೊಳಿವರೆಯ್ದಿ । ನಡೆವಲ್ಲಿ- ।
ಗಾದಿ ಮಂಗಲದ ಶೋಭನ ॥ ೭೭ ॥

ಭರತೇಶನ ಶೋಭನವ ಸ್ಮರಿಸಿದರೆ ಸುಖವಕ್ಕು ।
ಸಿರಿಯಕ್ಕು ಪುಣ್ಯ ಘನವಕ್ಕು । ಜಯವಕ್ಕು ।
ಗುರು ಹಂಸನಾಥನೊಲವಕ್ಕು ॥ ೭೮ ॥

## ಪ್ರಥಮ ಕಲ್ಯಾಣದ ಶೋಭನ ಸಮಾಪ್ತ.

# ಮಧ್ಯಮಂಗಲದ ಶೋಭನ ಸಂಧಿ

ಶ್ರೀನಿರಂಜನ ಸಿದ್ಧ ಜ್ಞಾನೈಕಮಯ ಸಿದ್ಧ ।
ಆನಂದಸಿದ್ಧ । ಜಯಸಿದ್ಧ ।
ಜ್ಞಾನ ಸಂಸಿದ್ಧಾ ಮತಿದೋರು ॥ ೧ ॥

ಭರತರಾಜನಿಗಿನ್ನು ಸಿರಿಸುಖ ದಿನದಿನಕೆ ।
ಬೆರಸಿದ್ದೂರ್ಜಿ [ತ] ಗಳಹವೆಂಬ । ಸೂಚನೆಗೆ ।
ಪರಿದನೂರ್ಜಿತಮಿಗೆ ಮುಂದೆ ॥ ೨ ॥

ಕ್ಷೇಮಲಗ್ನದಿ ಮತ್ತೆ ಪ್ರೇಮದಾಪ್ತರುಗೂಡಿ ।
ಸೋಮಪ್ರಭರಾಜ ಮನೆಯಿಂದ । ತೆರಳಿದನು ।
ಕಾಮಿಸುತ ದಿವ್ಯ ಶಕುನಗಳ ॥ ೩ ॥

ಯೆ [ಎ] ಡದಲ್ಲಿ ಪಲ್ಲಿಗಳು ನುಡಿದವು ವಾಯಸ ।
ಒಡನೆ ಹಾರಿದವು ಬಲಕಾಗಿ । ಮನದಲ್ಲಿ ।
ಗುಡಿಗಟ್ಟುತವ ನಡೆದನು ॥ ೪ ॥

ವಿದಿತ ಬ್ರಾಹ್ಮಣರಿಬ್ಬರಿದಿರಾಗಿ ನಡೆತರಲು ।
ಅದೆ ಪೂರ್ಣ ಕುಂಭವಿದರಲ್ಲಿ । ಸಂದಿಸಲು ।
ಹೃದಯದೊಳುಬ್ಬಿ ಗಮಿಸಿದನು ॥ ೫ ॥

ಸಿದ್ಧಿಯಹುದು ಇನ್ನು ಸಿರಿಯಹುದು ನಡೆದ ಕಾರ್ಯ ।
ಸಿದ್ಧಿ ಬಹುದೆಂದು ಕೆಲಬಲದಿ । ನುಡಿದಾಡೆ ।
ಕೇಳು ತಡಿಯಿಟ್ಟ ॥ ೬ ॥

ಪುರದ ಬಾಗಿಲ ದಾಂಟೆ ಪುರಜನವೊಗ್ಗಾಗೆ ।
ಭರದಿಂದ ಹಸು ಬಲನಾಯ್ತು । ಸದರವೆ ।
ಭರತ ಭೂಭುಜನ ಬಲು ಪುಣ್ಯ ॥ ೭ ॥

ಕರಿವಕ್ಕಿ ತಿದ್ದಿದವು ಗರುಡ ತಿದ್ದಿದುದಕೆ ।
ಮರಿಯಿಟ್ಟು ಮುಂದೆ ನಡೆವಾಗ । ನೆಗೆವಾನೆ ।
ಶಮಿಯಲ್ಲಿ ಗೂಳಿಯಿದಿರಾಯ್ತು ॥ ೮ ॥

ಆ ಮಹಾ ಶಕುನಕ್ಕೆ ಕ್ಷೇಮವಾಯ್ತೆಲ್ಲರು ।
ಭೂರಿ [ಮಿ] ಭೋರೆಂಬ ರವ [ಭ] ಸದಲ್ಲಿ* । ನಡೆದರು ।
ಸೋಮಪ್ರಭರಾಜನೊಡಗೂಡಿ ॥ ೯ ॥

ಮುಂದೂರ್ಜಿತ ನಾಯಕನು ಹಿಂದೆ ಸೋಮಪ್ರಭನು ।
ಚಂದದಿ ಪೋಗುತಿರಲಿತ್ತ । ಅತ್ತ ಕಿ- ।
ಕ್ಕಿಂದ ಪುರದೊಂದು ಸ್ಥಿತಿಯಿನ್ನು ॥ ೧೦ ॥

ಅಂದೆಲ್ಲರದನು ಕಿಕ್ಕಿಂದ ಪುರವೆಂಬರು ।
ಸಂದ ಕಲಿಯುಗದೊಳಗೆಲ್ಲ । ಆನೆಯ ।
ಗೊಂದೆಂಬ ಪೆಸರಾಯ್ತು ॥ ೧೧ ॥

ಹರೆಯುವಾದಳು ಮಗಳು ಪರಿಣಯನಕಿದು ವೇಳೆ ।
ಪುರುನಾಥ ನೆನೆಯದಿಹುದೇನು । (ಎಂದಿಂತು) ।
ಸ್ಮರಣೆ ಮಾಡಿದನು ದಿವಿರಾಜ ॥ ೧೨ ॥

ಗಂಡಿನವರು ಬೇಡೆ ಕೊಂಡೊಯ್ವುದುಚಿತವು ।
ಕೊಂಡೊಯ್ದು ನಾ ಕೊಡುವುದು । ಕೀಳವೆಂ- ।
ದಂಡಿಸಿ (?) ಚಿಂತೆಗೊಳುತಿರ್ದ ॥ ೧೩ ॥

ಲಲನೆಯಾಗುವಳೀಕೆ ಭರತ ಚಕ್ರಿಗೆಂದರು ।
ತಳುವಾಗಿ ಮದುವೆಯಾಹುದೇನು । ಯೆಂದು ತ- ।
ನ್ನೊಳಗೆಣಿಸಿದಳು ಸುರದೇವಿ ॥ ೧೪ ॥

ನುಡಿಯದೆ ತಾಯ್ತಂದೆಗಳು ಮಿಡುಕಿ ಚಿಂತಿಸುವಾಗ ।
ನುಡಿದವು ಗೌಳಿಯಿದಿರಲ್ಲಿ । ಚಿಂತೆಗಿದು ।
ಕಡುಲೇಸೆಂದೊಳಗೆ ನಲಿದರು ॥ ೧೫ ॥

* ರವದಲ್ಲಿ

ಮಿಗೆ ಕುಂತಳವತಿ ಹಲವು ನಿದ್ರೆಯೊಳಿರ್ದು ।
ಸೊಗಸಾದ ಕನಸ ನೆರೆಕಂಡು । ಕಣ್ದೆರೆದು ।
ದಿಗಿಲನೆದ್ದೊಡನೆ ಕುಳಿತಳು ॥ ೧೬ ॥

ಒಂದೊಂದು ಊಳಿಗವ ಪೇಳ್ದೊಂದೂಳಿಗವೆಣ್ಣುಗಳ ।
ಸಂದಣಿಯ ಕಡೆಗೆ ತೊಲಗಿಸಿ । ನುಡಿದಳು ।
ನಂದಕಿಯೆಂಬ ಸಖಿಯೊಡನೆ ॥ ೧೭ ॥

ಹೆಣ್ಣೆ ಕೇಳಾನೊಂದು ಬಣ್ಣದ ಸ್ವಪ್ನವ ಕಂಡೆ ।
ಬಣ್ಣಿಪೊಡೆ ಲಜ್ಜೆ ಬಿಡದಿದೆ । ಯೆಂದೆಳೆ ।
ವೆಣ್ಣುಗಳರಸಿ ನುಡಿದಳು ॥ ೧೮ ॥

ಪರರೊಡನೆ ನುಡಿವುದಕೆ ಕರನಾಣ್ಚುಬೇಕಕ್ಕ ।
ಎರವೆ [ಡೆ] ನಾ ನಿನಗೆ ಒರೆಯೆ* । ಎಂದಪ್ಪಿ ।
ಸರಸದಿ ಕೇಳ್ದವಳಾಗ ॥ ೧೯ ॥

ನನ್ನ ಕಿವಿಯಲ್ಲದೆ ನಾನನ್ಯರಿಂಗರುಹಿದರೆ ।
ನಿನ್ನಾಣೆ ನನ್ನ ಮನದಲ್ಲಿ । ಭರತೇಶನ ।
ಚೆನ್ನಡಿಗಳಾಣೆ ನುಡಿಯೆಮ್ಮಾ ॥ ೨೦ ॥

ಕೇಳಯೋಧ್ಯಪುರದಿಂದೋಲೆ ತಂದೊಬ್ಬನು ।
ಅಲ್ಲಿಯಿಂದೆಮ್ಮ ಜನಕಂಗೆ । ಯುತ್ಸಹವನು ।
ಪೇಳುವುದ ಕಂಡೆ ಕನಸಿನೊಳು ॥ ೨೧ ॥

ಬುಧರಾ (?) ಕನಸು ಲೇಸು ಸುಮದುವೆ ತಪ್ಪದು ನಿನಗೆ ।
ಎದೆ ತಣ್ಣಗಾಯ್ತು ನನಗೆಂದು । ಹರಸಿ ಸೂ ।
ಸಿದಳು ಸೇಸೆಯನು ಸಸಿ[ನಗೆ]ಗೂಡಿ ॥ ೨೨ ॥

ಇಬ್ಬರಿಗಲ್ಲದೆ ಪರರಿಗೊಬ್ಬರಿಗೂ ಸೂಚಿಸದೆ ।
ತುಬ್ಬ ಗಂಭೀರವಳಿಯದೆ । ನೆನೆನೆನೆ ।
ದುಬ್ಬುತ ಗೆಲುವಿನೊಳಗಿಹರು ॥ ೨೩ ॥

---

* ಮೆರೆದು

ಬಂದೂರ್ಜಿತ ನಾಗ ಕಿಕ್ಕಿಂದ ಪುರ ಪೊಕ್ಕು ।
ಮುಂದೆಲೆ ಒಲವನುಡುಗೊರೆಯ । ಸಲಿಸಿ ತಾ ।
ನಂದೆಯ್ದಿ ಕಂಡ ನೃಪತಿಯ ॥ ೨೪ ॥

ಪುರುನಾಥ ಕಳುಹಿದನು ಬರುತಿಹರು [ನು] ಸೋಮಪ್ರಭನು ।
ಹರುಷದ ವಾರ್ತೆ ನಿನಗೆಂದು । ಸೂಚನೆಯನು ।
ರೊರೆದನೂರ್ಜಿತ ನೃಪಗೆ ॥ ೨೫ ॥

ಒಳಿತೊಳಿತು ನೀನು ಕುಳಿರೆಂದವನಿಗೆ ।
ಕುಳಿರಕೊಡೆ ನ[ಯ]ವ ಕುಳಿತನು । ದಿವಿರಾಜ ।
ಮೆಲ್ಲನೋದಿಸಿದ ಲಿಖಿತವ ॥ ೨೬ ॥

ಓದಿಸಿ ಒಳಗರುಹಿದನಾದೀಶನ ಲೇಖನವ ।
ಆದರದಿಂದ ನಮಿಸಿದ । ಸುರಪದವಿ- ।
ಯಾದಂತೆ ನಲಿದ ದಿವಿರಾಜ ॥ ೨೭ ॥

ಊರ್ಜಿತ ನಾಯಕ ಬಂದುದೂರ್ಜಿತ ಮಂಗಲವಿದು ।
ಊರ್ಜಿತದುಲುಫೆಯುಡುಗೊರೆಯ । ನಿತ್ತು ವಿ- ।
ಸರ್ಜಿಸಿದ ಮನೆಗವ ಬೇಗ ॥ ೨೮ ॥

ಕರಸಿ ಮಂತ್ರಿಯ ಬೇಗ ಪುರವ ಸಿಂಗರಿಸಿಂದು ।
ನೆರೆದ ಬಿದ್ದರಿಗರುಹೆಂದು । ಪೇಳಿದ ಎ- ।
ಚ್ಚರದಿ ನೇಮಿಸಿದ ದಿವಿರಾಜ ॥ ೨೯ ॥

ಉಡುಗಿಸಿತಾಗಳೆ ಬೀದಿಯೊಡನೆ ಪನ್ನೀರಿಂದ ।
ಕಡುಸಾದು ಕತ್ತುರಿಯ ಮಿಗೆ ಹೂಸಿ । ಹೂವನು ।
ಉಡಲು ಘುಮ್ಮೆಂದವೆಳೆದುಂಬಿ ॥ ೩೦ ॥

ಅರಮನೆ ಕೋಟೆ ಗೋಪುರ ತೇರು ಮಣಿ ಮಾಡ ।
ಬುರುಜು ಸಿಂಗರಿಸಿ ಮೆರೆವಾಗ । ಕಿಕ್ಕಿಂದ ।
ಪುರವಿದ್ದುದಿಂಪ್ರಪುರದಂತೆ ॥ ೩೧ ॥

ಅಂಗಡಿ ಜಗುಲಿ ವಾರಾಂಗನೆಯರ ಕೇರಿ ।
ಸಿಂಗರವಾಗಿ ಮೆರೆವಾಗ । ಪುರವಿದ್ದು ।
ದಂಗಜನಾಳ್ವ ಪುರದಂತೆ ॥ ೩೨ ॥

ಎತ್ತ ನೋಡಿದರತ್ತ ತೆತ್ತಿಸಿದ ಕನ್ನಡಿ ।
ಮುತ್ತಿನ ಕುಚ್ಚು ಮಣಿಮಾಲೆ । ಯಿಂದಲ್ಲಿ ಸಂ- ।
ಪತ್ತು ಬಂದಂತೆ ಪುರವಿಹುದು ॥ ೩೩ ॥

ಮೊದಲೆಂಟು ದಿನ ಪುರವ ಮುದದಿ ಸಿಂಗರಿಸಿದರು ।
ಅದೆ ಬಂದ ಸೋಮ ಪ್ರಭರಾಜ । ದೂರದಲ್ಲಿ ।
ಎಸೆವ ವಾದ್ಯಗಳ ದನಿಯಾಯ್ತು ॥ ೩೪ ॥

ಆವನೊಬ್ಬ ಚರ ಮುಂದೈ ತಂದು ನೃಪನಲ್ಲಿ ।
ವಿವರಿಸಿ ಪೇಳ್ದ ಚರ ಬಂದ । ರಿಬ್ಬರಿಗೆ ।
ದಿವಿರಾಜ ಕೊಟ್ಟನುಚಿತವ ॥ ೩೫ ॥

ಮದಗಜ ತಾನೇರಿ ಆ ಗಲಭೆಯೊಳು ।
ಪರಿವಾರ ನಾನಾ ಸಿರಿಗೂಡಿ । ಬಿದ್ದಿನರಿಗೆ ।
ಇದಿರಾಗಿ ನಡೆದ ದಿವಿರಾಜ ॥ ೩೬ ॥

ಗಜವೆಷ್ಟು ಧ್ವಜಪತಾಕೆಗಳೆಷ್ಟು ।
ನಿಜವಾದ್ಯಗಳೆಷ್ಟು ನೃಪರೆಷ್ಟು । ನೋಡೆ ಭೂ- ।
ಭುಜನರ್ತಿವಟ್ಟ ಮನದಲ್ಲಿ ॥ ೩೭ ॥

ಅಂದಳ ಪಲ್ಲಕ್ಕಿ ನಿಂದಾ [ತಾ] ಸತ್ತಿಗೆಯಲ್ಲಿ ।
ಒಂದೊಂದು ಪರಿಯ ಹೋ[ತೋ]ರಿಹರು । ಪಿಜ್ಜಗೆಯ ।
ಸಂದಣಿ ನೋಡಿದ ದಿವಿರಾಜ ॥ ೩೮ ॥

ಥರಥರದ ಪರಿವಾರ ಮೊರೆವ ನಾನಾ ವಾದ್ಯ ।
ದೊರೆಗಳೊಗ್ಗಿನಲಿ ಗಜವೇರಿ । ವೋಡಿಯಲಿ ।
ಬರುತಿರ್ದ ಸೋಮಪ್ರಭ ರಾಜ ॥ ೩೯ ॥

ತಾನು ತನ್ನೊಳಗಾದ ನೆನೆ (?) ವಾದ್ಯಗಳಿಂದ ।
ಮಾನವೇಶ್ವರರ ಬಳಸಿನಲ್ಲಿ । ದಿವಿರಾಜ ।
ಆನೆಯನೇರಿ ಬರುತಿರ್ದ || ೪೦ ||

ಮುಟ್ಟಲಪ್ಪುದು ಒಂದು ತೊಟ್ಟಲಾನೆಯನಿಳಿದು ।
ಮೆಟ್ಟ ಹಾವುಗೆಯ ನಡೆತಂದು । ನಗುತರ್ತ್ಥಿ ।
ಬಟ್ಟಪ್ಪಿಕೊಂಡ ಹರುಷದಿ || ೪೧ ||

ನಿಮಗೆ ಕ್ಷೇಮವೆ ಮತ್ತೆ ತಮಗೆ ಕ್ಷೇಮವೆಯೆಂದು ।
ಸವಿನುಡಿಯಿಂದ ನುಡಿದಾಡೆ । ಮತ್ತೆಲ್ಲರು ।
ಪ್ರೀತಿ ಮಾರ್ಗವನಿಬ್ಬರೆಸಗಿದರು || ೪೨ ||

ಮತ್ತೆತ್ತಣ ನೃಪತಿಗೆ ವಿನಯವ ನುಡಿದುದು ।
ಇತ್ತಣ ನೃಪತಿಗವ ನುಡಿಯಿಂದ । ನೊಡನೊಲ್ದು ।
ಉತ್ತಮ ಗಜವೇರಿ ನಡೆದರು || ೪೩ ||

ದಿಬ್ಬಣವೆರಡೊಂದು ಮಹಾದಿಬ್ಬಣವಾದುದು ।
ಉಬ್ಬುತ ಪುರಕೆ ನಡೆದರು । ಜನಕಿಂತು ।
ಹಬ್ಬ ಬಂದಂತೆ ನಲಿದರು || ೪೪ ||

ಕೊಂಬು ಬೊಂಬುಳಿ ಕಾಳೆ ಚಂಬಕವ ನಿಸ್ಸಾಳೆ ।
ತಂಬಟೆ ಭೇರಿ ಬಡಿಯಲು । ಹೊಕ್ಕರಾ ।
ಡಂಬರದಿಂ ಪುರವನು || ೪೫ ||

ಎರಡು ದಿಬ್ಬಣವಾ ಸರ್ವರ ಕೇರಿಯಲ್ಲಿ ।
ಪರಿದು ಕಿಕ್ಕಿಂದವನೆ ತುಂಬೆ । ಕಿಕ್ಕಿಂದ ।
ಪುರವೆಂಬ ಹೆಸರು ನಿಜವಾಯ್ತು || ೪೬ ||

ತೋರಣವನು ಕಟ್ಟೆ [ದಾ] ಕೇರಿಯಲ್ಲಿ ಬಹಾಗ ।
ಆರೈದು ಸೋಮಪ್ರಭರಾಜ । ಪುರವೆಲ್ಲ ।
ಸಿಂಗರಕೆ ಮೆಚ್ಚಿ ತಲೆದೂಗೆ || ೪೭ ||

ತುಂಗಭದ್ರಾನದಿಯು ತುಂಗಾದ್ರಿ ಬಳಸಿದೆ ।
ಸಿಂಗಾರ ಬೇಡವೆನಬೇಕು । ನಗರದ ।
ಹೆಂಗಳೆಲ್ಲರು ನೆನದರು ॥ ೪೮ ॥

ಬಂದೊಯ್ಯನರಮನೆಯ ಮುಂದಾನೆಗ್ಗಳನಿಳಿದು ।
ಮುಂದೆ ಚಾವಡಿಯೊಳು * । ನೃಪರಿಬ್ಬ ।
ರೊಂದಾಗಿ ಕುಳಿತರೊಲವಿನಲ್ಲಿ ॥ ೪೯

ಅರಸು ಪ್ರಾಪ್ತರು ಥರವರಿ [ದು] ಕುಳಿತಾರು ।
ಪರಿವಾರ ಪ್ರಜೆಗಳಿದಿರಲ್ಲಿ । ನೋಳ್ಪಾಗ ।
ಓಲಗವೆ ಸೊಬಗಾಯ್ತು ॥ ೫೦ ॥

ಸರಸ ಪ್ರಸಂಗದಲ್ಲಿ ಪಿರಿದು ಹೊತ್ತಿರಲಾಗಿ ।
ಬರಸಿ ಬಂಧುಗಳಾ । ರೋಗಣೆಗೆ ।
ಕರೆದುಕೊಂಡೆದ್ದ ದಿವಿರಾಜ ॥ ೫೧ ॥

ಕಳವೆಯ ರಾಜಾನ್ನ ಜಳಜಳಿಸುವ ವಿಮಲಾನ್ನ ।
ತಿಳಿಯ ತುಪ್ಪದಾಹಿ ಸರತೋಯ । ಕಚ್ಚುರಿಹ ।
ಪ್ಪಳದಲಾಯ್ತೂಟ ಸಖರಿಗೆ ॥ ೫೨ ॥

ಪರಮಾನ್ನ ಪಾನದಲ್ಲಿ ಪರಿಪರಿಯ ಕಜ್ಜಾಯದಲ್ಲಿ ।
ನೊರೆವಾಲು ಘಟ್ಟಿ ಪೊಸರೆಂದಾ । ಸರ್ವರಿಗೆ ।
ಭರತೇಶವೆನಲಾಯ್ತು ಸವಿಯೂಟ ॥ ೫೩

ಜಿನಿವಾಲು ಬೆಣ್ಣೆಯಲಿ ಬಗೆಮುರಿ ಸರ್ಕರೆಯಲಿ ।
ಪರಮ ರಸಾನದ ಗುಟುಕಿಯಲ್ಲಿ । ಪಲಬರಿಗೆ ।
ಸುಲಭವೆನಲಾಯ್ತು ಸವಿಯೂಟ ॥ ೫೪ ॥

ಬಗೆಬಗೆಯ ಬಣ್ಣಾದ ಫಲ ಬಗೆ ಬಗೆಯ ಸಾಬ (?) ಗಳು ।
ಬಗೆ ಬಗೆ ಪಕ್ವಫಲದಿಂದ । ಬಂಧುಗಳು ।
ತೃಪ್ತಿಬಟ್ಟರು ಜನವೆಲ್ಲ ॥ ೫೫ ॥

---

* ಚಾವಡಿದರು.

ಪರಿಮಳವ ವೀಳೆಯವ ವರವಸ್ತ್ರ ಭೂಷಣವ
ಪರಮ ಬಂಧುಗಳಿಗೆ ಒಲಿದಿತ್ತು । ದಿವಿರಾಜ ।
ಪರಿವಾರಕೆಲ್ಲ ತೊಡಲಿತ್ತ ॥

ಕುರುವ (?) ಬಟ್ಟರು ವಿವಿಧ ನಿಯೋಗಿಗಳು ।
ಅವನಿಪರು ನೆರೆ ತಲೆದೂಗೆ । ಸರ್ವರಿಗೆ ।
ದಿವಿರಾಜ ಕೊಟ್ಟ ತೊಡಲುಡಲು ॥ ೫೭ ॥

ಸೋಮಪ್ರಭರಾಜರಿಗೆ ಪ್ರೇಮದ ವಾಕ್ಯವಾ [ಡಿ]
ಹೇಮದುಪ್ಪರಿಗೆ ಗಡಿಯಿಟ್ಟಾಡಿಸಿ | ಸರ್ವರಿಗೆ ।
ನೇಮಿಸಿ ಕೊಟ್ಟಾಗ ಮಗುಳ್ದಾತನು ॥ ೫೮ ॥

ಕಳೆದುದೊಂದೆರಡಿರುಳು ಬಳಿಕೊಂದು ರಾತ್ರಿಯಲಿ |
ಬಲುನೃಪರಾಷ್ಟ್ರರೊಡಗೂಡಿ । ರಾಯನ ।
ನಿಳಯಕ್ಕೆ ಸೋಮಪ್ರಭರಾಜ ॥ ೫೯ ॥

ಅರಮನೆ ತುಂಬಿ ಸರ್ವರುಗೂಡಿ ಕುಳಿತಾಗ |
ಪರಸದೊಳಿದ್ದ ದಿವಿನೃಪಗೆ | ಮೆಲ್ಲಗಿಂ- ।
ತೊರೆದನು ಸೋಮಪ್ರಭರಾಜ ॥ ೬೦ ॥

ಪು [ಅ] ರಸ ಕೇಳಿ [ದು] ದಿವಿರಾಜ ಪುರುನಾಥನ ಹೆಮ್ಮಗನಿಗೆ ।
ತರು[ವೆ]ವೆಂದು ನಿನ್ನ ತನುಜೆಯ । ಬೇಡಿ ಬೇಡುವೆ [ಲು]
ಸಿರಿಗೆಮ್ಮೊಳೂರ್ತು ಕಳುಹಿದನು ॥ ೬೧ ॥

ಕೊಡು ಕುಂತಳವತಿಯ ಷಟ್‌ಖಂಡದೊಡೆಯನ ।
ಕಡು ಚೆಲ್ವ ಭರತನೃಪನ । ಮಹಿಮೆಯ ।
ತಡೆಯದೆ ನುಡಿದ ಸಭೆಯಲ್ಲಿ ॥ ೬೨ ॥

ನುಡಿದುದುತ್ತಮ ಲೇಸು ಜೇಡ್ಡುದೊಳಿತು ಸಂತೋಷ |
ಕೊಡುವೆನೆಂದನು ತಾ ದಿವಿರಾಜ | ಯೆಂದೆಲ್ಲ |
ಸಸಗೆರಗೊಂಡುನ ಎಡಿದರು ॥ ೬೩ ॥

ಕೊಳು ಕೊಡಿಗಿಬ್ಬರ ದೆಸೆಯಕೆ ಕುಲಚಲದ ಸಿರಿ ನೆನೆದಿತ್ತಿ— ।
ನಲು ದಿವಿರಾಜ ........ । ........ ಮ — ।
ತ್ತೊಲುಮೆದೋರಿದ ಸೋಮಪ್ರಭರಾಜ || ೬೪ ||

ನೀವು ಕೇಳ್ವುದು ಭಾಗ್ಯ ನಾವಲ್ಲವೆಂಬೆವೆ ।
ಆವಿರಾಗವನು ನೊಲಿದು । ದೆಂದೆನುತ ।
ಭೂವರನುಬ್ಬಿ ಜಯಜಯುವೆನಲು || ೬೫ ||

ಹುಟ್ಟಿದಂದೆ ಹೆಣ್ಣು ಕೊಟ್ಟದ್ದುದಾತನಿಗೆ ।
ಕೊಟ್ಟೆನೆಂಬುದುಪಚಾರ । ನೀವೆನ್ನ ।
ಪಟ್ಟಣಕೆ ಬಂದ ಸಿರಿಕಿರಿದೆ || ೬೬ ||

ಅದು ಸಾಕು ಕೊಳುಕೊಡಿಗೆ ಮುದತಾಳಿ ಬಂಡಿಯ ।
ಮೊದಲಲ್ಲಿ ಕಟ್ಟು ಮದುವೆಯನಲ್ಲಿ । ಮಾಳ್ಪದು ।
ಒಪ್ಪಿದೆ*ನೆಂದ ದಿವಿರಾಜ || ೬೭ ||

ಸರಿದೊರೆಗಳಿಗಂತಹುದು ವರಚಕ್ರಿಗಂತಹುದೆ ।
ಭರದೊಳಯೋಧ್ಯಾಪುರದಲ್ಲಿ । ನೆನೆವಾಗ ।
ಸರಿಯೆಂದ † ಸೋಮಪ್ರಭರಾಜ || ೬೮ ||

ತೀವಿ ತೊಂಭತ್ತಾರುಸಾವಿರ ಪೆಣ್ಣಾ[ದಪು]ವು ನಾನಾ ।
ಠಾವಿಗೆಯುವ ಹೋಹಾನದರಿಂದ ।
ನೀವಲ್ಲಿಗೆಯ್ದಿ ಕೊಡುವುದು ಲೇಸು || ೬೯ ||

ಪ್ರಾರಂಭದಲ್ಲಿ ಕೈಧಾರೆಗೆ ನಿನ್ನಯ ಪುತ್ರಿ ।
ಸೇರಿದ ತೇಜಕಿರಿದೆ । ಯೊಪ್ಪೆಂದ ।
ರಾರಾಯ ಕೂಡೆಯೊಡಂಬಟ್ಟ || ೭೦ ||

ತಾಳಿ ಬಂದಿಯ ಮುಂದೆ ಮೇಳೈಸುವಹುದೀಗ ।
ವೀಳೆಯದೊಸಗೆ ಸಲ್ಲಲೆನಲು । ಕೊಟ್ಟನು ।
ವೀಳೆಯವನೊಪ್ಪಿ ದಿವಿರಾಜ || ೭೧ ||

---

* ಗೊಪ್ಪಿರಿ † ಸಿರಿಗೆಂದ

ಕೊಡುವೆನೆಂದವ ಕೊಡಲು ಪಿಡಿದೊಸಗೆಯ ನೀವು ।
ಪಿಡಿಯೆಂದು ಸೋಮಪ್ರಭಕೊಟ್ಟ । ಮತ್ತಾತ ।
ಗುಡುಗೊರೆಯ ಕೊಟ್ಟರವರೊಲ್ದು || ೭೨ ||

ನೀತಿತ್ತರೆಲ್ಲದು ನಾವಾಂತುದಲ್ಲವೆ ।
ಹಾನಿಯಿಲ್ಲದಕೆ ದಿವಿರಾಜ । ಯೆಂದು ಸ- ।
ನ್ಮಾನಿಸಿ ಕೊಟ್ಟನುಡುಗೊರೆಯ || ೭೩ ||

ವೀಳೆಯ ಮುಂತಾಗಿ ತತ್ಕಾಲ [ಲ]ಗ್ನದೊಳಗೆಲ್ಲ ।
ಮೇಲುಡುಗೊರೆಯ ನೆರೆತೀವೆ । ನೃಪರ ರಾ- ।
ಜಾಲಯಕೆ ಹೊರಿಸಿ ಕಳುಹಿದರು || ೭೪ ||

ಭರತೇಶ್ವರನ ತ್ಯಾಜಿಯರಿಗೆ ಊಳಿಗದ ಹೆಂಗಳಿಗೆ ।
ಪುರುನಾಥನ ಸೊಸೆಗೆ ಕಳುಹಿದನು । ವಸ್ತ್ರಗಳ ।
ಪರಿಮಳ ಭೂಷಣವ ಸೋಮಪ್ರಭ ರಾಜ || ೭೫ ||

ಭಾನುರಾಜ ನೃಪಗೆ ಗಾನ ಮಿಗೆ ಕವಿಗಳಿಗೆ ।
ಸೇನೆಗೆಯುಡುಗೊರೆಯ ತೊಡಿಗೆಯ । ಕೊಟ್ಟ ನಿ- ।
ನ್ನೇನ ಬಣ್ಣಿಸುವೆನೊಸಗೆಯ || ೭೬ ||

ತಡವಿಲ್ಲದೆಮ್ಮ ಸಂಗಡ ಪಯಣವಾಗೆಂದು ।
ನುಡಿದೋರಿ ಸೋಮಪ್ರಭರಾಜ । ಬೀಡಾರ ।
ಕಡಿಯಿಡುವಾಗ ಪುರೆಯಿಡಲು (?) || ೭೭ ||

ಮತ್ತೆರಡು ದಿನದ ಮೇಲುತ್ತಮದ ಲಗ್ನದಲ್ಲಿ ।
ಚಿತ್ತಶುದ್ಧಿಯಲಿ ದಿವಿರಾಜ । ಸನ್ನಾಹ- ।
ವಿತ್ತು ಮಾಡಿದನು ಜಗದರಿಕೆ || ೭೮ ||

ಹೊಳಲ ರಕ್ಷಣೆಗೊಬ್ಬ ತಳತಂತ್ರ ಸೇನೆ ಸಹವಾಗಿ[ಟ್ಟು] ।
ವಾದ್ಯಗಳ ಗಲಭೆ[ಯೊಳು] ಹರುಷದಲ್ಲಿ । ಹೊರಟನು ।
ಇಳೆಯೆಲ್ಲಚ್ಚರಿಬಡುವಂತೆ || ೭೯ ||

ಕೊಳು ಕೊಡಿಗಿಬ್ಬರ ದೆಸೆಯಕೆ ಕುಲಚಲದ ಸಿರಿ ನೆನೆದಿತ್ತೆ– |
ನಲು ದಿವಿರಾಜ ......... | ......... ಮ – |
ತ್ತೊಲುಮೆದೋರಿದ ಸೋಮಪ್ರಭರಾಜ || ೬೪ ||

ನೀವು ಕೇಳ್ವುದು ಭಾಗ್ಯ ನಾವಲ್ಲವೆಂಬೆವೆ |
ಆವಿರಾಗವನು ನೊಲಿದು | ದೆಂದೆನುತ |
ಭೂವರನುಬ್ಬಿ ಜಯಜಯುವೆನಲು || ೬೫ ||

ಹುಟ್ಟಿದಂದೆ ಹೆಣ್ಣು ಕೊಟ್ಟದ್ದುದಾತನಿಗೆ |
ಕೊಟ್ಟೆನೆಂಬುದುಪಚಾರ | ನೀವೆನ್ನ |
ಪಟ್ಟಣಕೆ ಬಂದ ಸಿರಿಕಿರಿದೆ || ೬೬ ||

ಅದು ಸಾಕು ಕೊಳುಕೊಡಿಗೆ ಮುದತಾಳಿ ಬಂಡಿಯ |
ಮೊದಲಲ್ಲಿ ಕಟ್ಟು ಮದುವೆಯನಲ್ಲಿ | ಮಾಳ್ಪುದು |
ಒಪ್ಪಿದೆ*ನೆಂದ ದಿವಿರಾಜ || ೬೭ ||

ಸರಿದೊರೆಗಳಿಗಂತಹುದು ವರಚಕ್ರಿಗಂತಹುದೆ |
ಭರದೊಳಯೋಧ್ಯಾಪುರದಲ್ಲಿ | ನೆನೆವಾಗ |
ಸರಿಯೆಂದ † ಸೋಮಪ್ರಭರಾಜ || ೬೮ ||

ತೀವಿ ತೊಂಭತ್ತಾರುಸಾವಿರ ಪೆಣ್ಣಾ[ದವು]ವು ನಾನಾ |
ತಾವಿಗೆಯುವ ಹೋಹಾನದರಿಂದ |
ನೀವಲ್ಲಿಗೆಯ್ದಿ ಕೊಡುವುದು ಲೇಸು || ೬೯ ||

ಪ್ರಾರಂಭದಲ್ಲಿ ಕೈಧಾರೆಗೆ ನಿನ್ನಯ ಪುತ್ರಿ |
ಸೇರಿದ ತೇಜಕಿರಿದೆ | ಯೊಪ್ಪೆಂದ |
ರಾರಾಯ ಕೂಡೆಯೊಡಂಬಟ್ಟ || ೭೦ ||

ತಾಳಿ ಬಂದಿಯ ಮುಂದೆ ಮೇಳೈಸುವಹುದೀಗ |
ವೀಳೆಯದೊಸಗೆ ಸಲ್ಲಲೆನಲು | ಕೊಟ್ಟನು |
ವೀಳೆಯುವನೊಪ್ಪಿ ದಿವಿರಾಜ || ೭೧ ||

---

* ಗೊಪ್ಪಿರಿ † ಸಿರಿಗೆಂದ

ಕೊಡುವೆನೆಂದವ ಕೊಡಲು ಪಿಡಿದೊಸಗೆಯ ನೀವು ।
ಪಿಡಿಯೆಂದು ಸೋಮಪ್ರಭಕೊಟ್ಟ । ಮತ್ತಾತ ।
ಗುಡುಗೊರೆಯ ಕೊಟ್ಟರವರೊಲ್ಪು ॥ ೭೨ ॥

ನೀತಿತ್ತರೆಲ್ಲದು ನಾವಾಂತುದಲ್ಲವೆ ।
ಹಾನಿಯಿಲ್ಲದಕೆ ದಿವಿರಾಜ । ಯೆಂದು ಸ- ।
ನ್ಮಾನಿಸಿ ಕೊಟ್ಟನುಡುಗೊರೆಯ ॥ ೭೩ ॥

ವೀಳೆಯ ಮುಂತಾಗಿ ತತ್ಕಾಲ [ಲ]ಗ್ನದೊಳಗೆಲ್ಲ ।
ಮೇಲುಡುಗೊರೆಯ ನೆರೆತೀವೆ । ನೃಪರ ರಾ- ।
ಜಾಲಯಕೆ ಹೊರಿಸಿ ಕಳುಹಿದರು ॥ ೭೪ ॥

ಭರತೇಶ್ವರನ ತ್ಯಾಜಿಯರಿಗೆ ಊಳಿಗದ ಹೆಂಗಳಿಗೆ ।
ಪುರುನಾಥನ ಸೊಸೆಗೆ ಕಳುಹಿದನು । ವಸ್ತ್ರಗಳ ।
ಪರಿಮಳ ಭೂಷಣವ ಸೋಮಪ್ರಭ ರಾಜ ॥ ೭೫ ॥

ಭಾನುರಾಜ ನೃಪಗೆ ಗಾನ ಮಿಗೆ ಕವಿಗಳಿಗೆ ।
ಸೇನೆಗೆಯುಡುಗೊರೆಯ ತೊಡಿಗೆಯ । ಕೊಟ್ಟ ನಿ- ।
ನ್ನೇನ ಬಣ್ಣಿಸುವೆನೊಸಗೆಯ ॥ ೭೬ ॥

ತಡವಿಲ್ಲದೆಮ್ಮ ಸಂಗಡ ಪಯಣವಾಗೆಂದು ।
ನುಡಿದೋರಿ ಸೋಮಪ್ರಭರಾಜ । ಬೀಡಾರ ।
ಕಡಿಯಿಡುವಾಗ ಪುರೆಯಿಡಲು (?) ॥ ೭೭ ॥

ಮತ್ತೆರಡು ದಿನದ ಮೇಲುತ್ತಮದ ಲಗ್ನದಲ್ಲಿ ।
ಚಿತ್ತಶುದ್ಧಿಯಲಿ ದಿವಿರಾಜ । ಸನ್ನಾಹ- ।
ವಿತ್ತ ಮಾಡಿದನು ಜಗದರಿಕೆ ॥ ೭೮ ॥

ಹೊಳಲ ರಕ್ಷಣೆಗೊಬ್ಬ ತಳತಂತ್ರ ಸೇನೆ ಸಹವಾಗಿ[ಟ್ಟು] ।
ವಾದ್ಯಗಳ ಗಲಭೆ[ಯೊಳು] ಹರುಷದಲ್ಲಿ । ಹೊರಟನು ।
ಇಳೆಯೆಲ್ಲಚ್ಚರಿಬಡುವಂತೆ ॥ ೭೯ ॥

ಅಂಗನೆಯು ಮಗಳಿಗೆ ಪನ್ನಂಗದ ಪಲ್ಲಕ್ಕಿಯಲ್ಲಿ ।
ಹೆಂಗಳ ಮೊತ್ತದಲಿ ಬರುತಿರಲು । ಸಂತಸದಲ್ಲಿ ।
ಇಳೆಯ ಜನರೆಲ್ಲ ಜಯವೆನಲು ॥ ೮೦ ॥

ತಾಮಸ ಮಾಡದೆ ಭೂಪನೆದ್ದುದಕೆ ।
ಸೋಮಪ್ರಭರಾಜ ಪುರೆಯಿಟ್ಟು (?) । ಕುಡೆತಾನು' ।
ಕ್ಷೇಮದಲ್ಲಿ ನಡೆದ ಪಡೆಗೂಡಿ ॥ ೮೧ ॥

ವೊಂಟ (?) ಯಲ್ಲಿ ತಾಳಿ ಪಿಟ್ಟಗೆ (?) ಹೊರೆಗಳು ।
ಒಂಟೆ ಕಾಲಾಳು ಗಜತೇಜಿ । ಬರಲು ಕಡು ।
ಕಟ್ಟು ಹುಮ್ಮೈನಿಸಿ ತೆರಳಿದರು ॥ ೮೨ ॥

ಪುರವ ದಾಂಟೆದ ಮೇಲೆ ಕರೆದೂರ್ಜಿತ ನಾಯಕನ ।
ಹರಿವುದಯೋಧ್ಯಾಪುರಕೆಂದು । ಮುಂದವನ ।
ತೆರಳಿಸಿದ ಸೋಮಪ್ರಭರಾಜ ॥ ೮೩ ॥

ಬಂದ ಬಿದ್ದಿನರು ತಾನೊಂದಾಗಿ ನಡೆವಾಗ ।
ಮಂದಿಗೆ ಭೂಮಿಗೆ ತೆರಪಿಲ್ಲ । ವೆನೆ ಗಾಡಿ ।
ಯಿಂದೆಯ್ದುತಿರ್ದ ದಿವಿರಾಜ ॥ ೮೪ ॥

ಭರದಲ್ಲಿ ನಡೆದರೆ ದೇಹ ಕೊರಗುವುದು ಕನ್ನಿಕೆಗೆ ।
ತರಹರದಿ ಬನ್ನಿ ದಿವಿರಾಜ । ಎಂದು ತಾ ನಿ– ।
ಸ್ತರಿಸಿದ ಸೋಮಪ್ರಭರಾಜ ॥ ೮೫ ॥

ಪುರುನಾಥನ ಸೊಸೆಯಂತೆ ಭರತೇಶನ ಸತಿಯು ।
ನುರುತರವೇಕೆ ನಮಗಿಂದು । ಸುಖದಲ್ಲಿ– ।
ಬ್ಬರು ಜೋಕೆಯಲ್ಲಿ ನಡೆಸಿದರು ॥ ೮೬ ॥

ಕುರುಕುರು ಪಯಣದಲ್ಲಿ ತೆರಪರಿತು ನಡೆಯುತ ।
ಮರುದಿನವೆತ್ತಿ ನಡೆಯತ್ತ । ಕನ್ನೆಗೆ ।
ಹರುಷದೋರುವಂತೆ ನಡೆದರು ॥ ೮೭ ॥

ದೇವರಿಗೊಂದು ಹೂವನೊಯ್ವರಂತೆ ।
ಭಾವಿಸಿ ಭರತ ನೃಪತಿಗೆ । ತರುಣಿಯೊಂ ।
ದಾವೊಯ್ಯುತಿದ್ದರೊಲವಿನಲ್ಲಿ ॥ ೮೮ ॥

ಸಂದ ಸಂಪತ್ತು ಸಕಲ ಸೌಭಾಗ್ಯವ ।
ಎಂದೆ ಸೂಚಿಸುತ ಪಯಣದಲ್ಲಿ । ಭರತೇಶ ।
ನಿಂದಧಿಕ ಪುಣ್ಯ ದೊರೆಯುಂಟೆ ? ॥ ೮೯ ॥

ತೆರಳುವಾಗಲ್ಲಲ್ಲಿ ಪುರಪುರಕೆ ಸಿಂಗರಿಸಿ ।
ನಿರದಿದಿಗ್ಗೋಂಬರಖಿಳರು । ಸದರವ್ಕೆ।
ಪುರನಾಥನ ಹಿರಿಯ ಸೊಸೆಯಲ್ತೆ ॥ ೯೦ ॥

ಮದುವೆಯಂತೆ ಮುದದೊಳಿವರೆಯ್ದೆ ।
ಅದಕಂಜಿ ತಾನು ಪುರಕೆಯ್ದಿ । ದೇವಗೆ ಒ- ।
ಪ್ಪದೊಳೆರಗಿ ಪೇಳ್ದನೊಸಗೆಯ ॥ ೯೧ ॥

ಮೋದದವಗುಡುಗೊರೆಯ ಆದರದೊಳಗಿತ್ತು ।
ಆ ದೇವನಿಬ್ಬರರಸಿಯರು । ಕಳುಹಿದರು ।
ದಾದಿಯ ಕಯ್ಯಲುಡುಗೊರೆಯ ॥ ೯೨ ॥

ಭರತೇಶನ ಸಖರೆಲ್ಲ ಕರೆದು ಮನ್ನಿಸಿದರು ।
ಪುರದಲುತ್ಸಾಹವೆಸಗಿತು । ದೇವನು ಸಿಂ ।
ಗರಿಸ ಹೇಳಿದನು ನಗರಿಯ ॥ ೯೩ ॥

ದೆಸೆದೆಸೆಯಲ್ಲಿ ಮಾಡಗಳು ಪೊಸಬುರುಜು ಸಿಂಗರಿಸಿ ।
ಮಿಸುಪ ತೋರಣವ ಗುಡಿಗಟ್ಟ । ಚೌಹವ (?) ಶಾ ।
ಣಿಸಿದವಲ್ಲಲ್ಲಿ ಮೆರೆವಾಗ ॥ ೯೪ ॥

ಸಾದು ಕಸ್ತುರಿಯಲ್ಲಿ ಬೀದಿ ಸಾರಣೆಯಾಯ್ತು ।
ಸಾದಿಸಿ ರಂಗೋಲೆಯಾಯ್ತು । ಪೂಗೆದರೆ ।
ಮೇದಿನಿ ಗಂಧಮಯವಾಯ್ತು ॥ ೯೫ ॥

ಕಂಚಿನ ತೋರಣ ರತ್ನ ಸಂಚಯದ ತೋರಣ ।
ಕಾಂಚನ ತೋರಣಗಳಿಂದ । ಪುರವಿಹುದು ।
ಮಿಂಚಿನ ಜಾತ್ರೆ ನೆರೆದಂತೆ ॥ ೯೬ ॥

ತೋರಣ ಮುತ್ತಿನ ಕುಚ್ಚು ಕೇರಿ ಕೇರಿಗಳಲ್ಲಿ ।
ಸೇರಿಸಿ ಕಟ್ಟೆ ಮೆರೆವಾಗ । ಪುರವಿಹುದು ।
ತಾರಗೆಯೆಸೆದಂತೆ ಮೆರೆದು ॥ ೯೭ ।

ಪಟ್ಟೆ ಕನ್ನಡಿ ಝುಲ್ಲಿ ನಿಟ್ಟಿಸಿ ದೆಸೆದೆಸೆಯಲ್ಲಿ ।
ಕಟ್ಟಲಯೋಧ್ಯಾಪುರವಾಗ । ಮಹಾಲಕ್ಷ್ಮಿ ।
ಪುಟ್ಟದ ಪುರವೊಯೆನಸಾಲ್ತು ॥ ೯೮ ॥

ದಿವಿರಾಜನರಮನೆಯ ಸವನಿ[ಸಿ] ಸಿಂಗರಿಸಿದರು ।
ಆವನ ಬಾಂಧವರಿಗರಮನೆಯ । ಕೇರಿಗಳು ।
ಹವಣಿಸಿ ಶೋಭೆವಡೆದವು ॥ ೯೯ ॥

ಮುನ್ನ ತಿಂಗಳು ತೊಡಗಿ ಚೆನ್ನಾಗಿ ರಾಗಿಸಿದ ।
ಸನ್ನಿಧಿಗೆ ಬಂದ ದಿವಿರಾಜ । ನಡೆಭೇರಿ ।
ಸನ್ನೆ ಸೂಚಿಸಿತು ಸಕಲರಿಗೆ ॥ ೧೦೦ ॥

ಕರೆ ಕಳುಹಿ ಭೂವರನ ಭರತೇಶನ ಕೆಳೆಯರನು ।
ಪರಿವಾರಗೂಡಿಯಿದಿರ್ಗೊಳ್ಳಿ । ಯೆನಲಾಗ ।
ಪುರುನಾಥ ಕರಸಿ ಬೆಸಸಿದ ॥ ೧೦೧ ॥

ನೀನು ಪೋಗೈ ಎಂದು ವೃಷಭೇಶ ದೇವರು ।
ಆನೆಯ ಮೇಲೆ ಕಳುಹಲು । ವಾದ್ಯವು ।
ಹಾನಾದ ವೆಸೆಯೆ ನಡೆದರು ॥ ೧೦೨ ॥

ಕಿರಿಯುಳಿಯನ ಮುಂದಿಟ್ಟು ಉರೆ ಕಚ್ಚ (?) ಭೂವರನು ।
ನೆರೆಯಳಿಯನ ಸಖರು ದೊರೆಗಳು । ಪ್ರಾಪ್ತರು ।
ತುರುಗಿ [ಹ] ಬ್ಬಿರೆ ನಡೆ [ದ] ನಿದಿರಾಗಿ ॥ ೧೦೩ ॥

ದಿವಿರಾಜರ ಕಂಡಪ್ಪಿ ಸಿವಹಕೆ ವಿನಯುವ ನುಡಿದು ।
ರರ [?] ದೊರೆ ಸೋಮಪ್ರಭನಿಗೆ । ಕಚ್ಛೇಂದ್ರ ।
ವಿವಿಧೋಪಚಾರನೆಸಗಿದ ॥ ೧೦೪ ॥

ವೃಷಭೇಶನೊಲವಿಂದ ಸೋಮಪ್ರಭನನು ಕಳುಹೆ ।
ಅಸಮ ಸಂತೋಷವಡೆದನು । ನನಗಿಷ್ಟು ।
ಹಸರೇಕೆಂದನು ದಿವಿರಾಜ ॥ ೧೦೫ ॥

ಕೇಳಿಯೆಲ್ಲರು ನಮಿಸಿ ನಿನ್ನಳಿಯನ ಸಖರವರು ।
ತಿಳಿಯೆಂದು ಸೋಮಪ್ರಭ ಪೇಳ್ದ । ದಿವಿರಾಜ ।
ಗೆಲನೊಡ ಲೇಸ ನುಡಿದನು ॥ ೧೦೬ ॥

ಭೇರಿ ತಮ್ಮಟೆ ಕಹಳೆ ವಿರಣವಲೆ [?] ನಿಸ್ಸಾಳ ।
ಭೋರೆನಲು ಸರ್ವರೊಡಗೂಡಿ । ಪುರವ ಗಂ- ।
ಭೀರದಲ್ಲಿ ಪೊಕ್ಕರೊಸಗೆಯಲ್ಲಿ ॥ ೧೦೭ ॥

ಪುರವ ಹೋಗಲೊಡನೆ ಬೇರರಮನೆಗೆ ಮಗಳನು ।
ಸುರದೇವಿಗೂಡ ಮಿಗೆ ಕಳುಹಿ । ದಿವಿರಾಜ
ಪುರುನಾಥನೆಡೆಗೆ ನಡೆದನು ॥ ೧೦೮ ॥

ಗಜವನಿಳಿದಖಿಳ ಭೂಭುಜರೊಡನೆ ಬರೆ ತನ್ನ ।
ನಿಜ ಸುತನ ಕೂಡಿ ಬರಲಾಗ । ಗಂಭೀರ ।
ರುಜುದೋರಿ ನಡೆದಾಗ ಮತ್ತಲ್ಲಿ ॥ ೧೦೯ ॥

ಸೋಮಪ್ರಭ ಕಚ್ಛೇಂದ್ರರು ಪ್ರೇಮದಿ ನಡೆಸಲು ಮುಂದೆ ।
ತಾ ಮೆಚ್ಚಿ ನಡೆದ ದಿವಿರಾಜ । ದೇವನ ।
ಆ ಮಹಾ ಸಭೆಯನೊಳಪೊಕ್ಕ ॥ ೧೧೦ ॥

ಸುರರೆರಗುವನಿಗೆ ನರರೆರಗುವದಚ್ಚರಿಯೇ ।
ದರುಸನವಾಗಿ ದಿವಿರಾಜ । ಮಗಗೂಡಿ ।
ಪುರುನಾಥನಡಿಗೆರಗಿದನು ॥ ೧೧೧ ॥

ಸ್ವಾಮಿ ಕುಳಿರ ಕೊಡಿಸೆ ತಾ ಮಗ ಸಹ ಕುಳಿತನು ।
ಸೋಮಪ್ರಭ ನೆರೆಗಾಲವ [?] ಗೂಡಿ । ಕಚ್ಛೇಂದ್ರ ।
ಕ್ಷೇಮಾಸನದಲ್ಲಿ ಕುಳಿತನು ॥ ೧೧೨ ॥

ದಿವಿರಾಜ ಪರಮ ಬಾಂಧವನಲ್ಲವೆ ನಮಗೆಂದು ।
ವಿವರಿಸಿದನೊಲ್ದು ಪುರುನಾಥ । ನಂತಹು ।
ದೆಂದನು ಸೋಮಪ್ರಭ ರಾಜ ॥ ೧೧೩ ॥

ನಿನ್ನ ಪುತ್ರಗೆ ತಕ್ಕ ಕನ್ನಿಕೆಯ ಪಡೆದವ– ।
ನುನ್ನತ ಬಂಧುವೆನಬೇಕು । ವಾಕ್ಯವು ।
ಚೆನ್ನಾದುದೆಂದ ಸೋಮಪ್ರಭನು ॥ ೧೧೪ ॥

ಎನೆ ಸೋಮಪ್ರಭ ನೀನಿಂತು ನುಡಿವರೆ ।
ನಾನಾ ರಾಜನ ಬಂಧು ಪರಮನ । ಪೂಜುವ ।
ಮಾನವನೆಂದ ದಿವಿರಾಜ ॥ ೧೧೫ ॥

ತೀರ್ಥೇಶನೊಳು ಚಕ್ರವರ್ತಿ ಹುಟ್ಟಿದ ನಮ್ಮ ।
ಪಾರ್ಥಿವರ ಪುಣ್ಯವದರಿಂದ । ಹೆಣ್ಣೊಂದು ।
ಕೂರ್ತಿತ್ತ ನಾನು ಸುಖಿಯೆಂದ ॥ ೧೧೬ ॥

ಸುಂದರಾರ್ಥವ ನುಡಿದ ಮುಂದೊಸಗೆಯನು ಮಾಡೆಂದ ।
ಇಂದೀತ ಮನೆಗೆ ತೆರಳಲಿ । ಕಳುಹಿಸಿ ಒ ।
ಲಿದು ಪೇಳಿದನು ಸೋಮಪ್ರಭನು ॥ ೧೧೭ ॥

ತಂದೆಗೆ ಮಗನಿಗೆ ಪೆಂಪಿಂದುಡುಗೊರೆಯಿತ್ತು ।
ಒಂದಾಗಿ ಬಂದ ದೊರೆಗಳಿಗೆ । ಮಾನಿಸಿ ।
ಮಂದಿರಕೆಯ್ದುವರ ಕಳುಹಿದನು ॥ ೧೧೮ ॥

ಮಗಗೂಡಿ ದೇವನಿಗೆ ಮಗುಳೆ ವಂದಿಸಿ ತನ್ನ ।
ಬಗೆಯ ಭೂಭುಜರು ಸಹವಾಗಿ । ದಿವಿರಾಜ ।
ನಗುತವೆಯ್ದಿದನು ನಿಜ ಗೃಹಕೆ । ॥ ೧೧೯ ॥

ಬಳಿಕ ಸೋಮಪ್ರಭನಿಗೆ ಉಲುಪಿಯುಡುಗರೆಯಿತ್ತು ।
ಬಳಿಬಂದ ನೃಪಗುಡಲಿತ್ತು । ವೃಷಭೇಶ ।
ಬಳಲಿದಿರಿ ಮನೆಗೆ ತೆರಳೆಂದ ॥ ೧೨೦ ॥

ಉಲುಪಿಗಳ ಬಿಯಗರಿಗೆ ನಿಲಲೀಯದೆ ಕಳುಹಿದ ।
ಒಳಗೆಯೂಳಿಗದ ಸತಿಯರಿಗೆ । ಕೈಯ್ಯಾ- ।
ಗಳುಡುಗೊರೆಯಿತ್ತು ಕಳುಹಿದನು ॥ ೧೨೧ ॥

ತಾನಿಷ್ಟು ಮಾಳ್ಪಾಗ ಮಾನಿನಿಯರೊಳಗರಿದು ।
ಬೋನಗುಡುಕಿಯನು ಕಳುಹಿದರು । ದಿವಿರಾಜ ।
ಗಾನಂದ ಹೆಚ್ಚಿತಡಿಗಡಿಗೆ ॥ ೧೨೨ ॥

ಪರಿವಾರಕೆ ನೃಪಗೆ ದೊರೆಗಳಿಗೆ ಮನೆಮಾರು ।
ಪಿರಿದುಲುಪಿ ಸಂದು ಸುಖಮಿರ । ಲೆಂದೊಲ್ದು ।
ಪುರುನಾಥ ಮಂತ್ರಿಗುಸುರಿದನು ॥ ೧೨೩ ॥

ವಿನಯದಲಿ ಕಚ್ಛರಾಜನ ಕಳುಹಿ ಮತ್ತಿತ್ತ ।
ಜನವ ಬೀಳ್ಕೊಟ್ಟು ವೃಷಭೇಶ । ತನ್ನರಮನೆಗೆಯ್ದೆ ।
ಜಿನಜಿನವೆಂದು ಪೊಗಳಿದರು ॥ ೧೨೪ ॥

ಚೋದ್ಯವಾಗಿರೆ ಧರೆಗೆ ಹೃದ್ಯ ಮಂಗಲ ಮಾಳ್ಪ ।
ಉದ್ಯೋಗದಲ್ಲಿ ವೃಷಭೇಶ । ನಿದ್ದನು ।
ಮಧ್ಯಮಂಗಲದ ಶೋಭನ ॥ ೧೨೫ ॥

ಭರತೇಶನ ಮಂಗಲವ ಸ್ಮರಿಸಿದರೆ ಸುಖವಕ್ಕು ।
ಸಿರಿಯಕ್ಕು ಪುಣ್ಯ ಘನವಕ್ಕು । ಜಯವಕ್ಕು ।
ಗುರುಹಂಸನಾಥನೊಲವಕ್ಕು ॥ ೧೨೬ ॥

**ಮಧ್ಯಮಂಗಲದ ಶೋಭನ ಸಮಾಪ್ತ**

# ಕಲ್ಯಾಣದ ಶೋಭನ ಸಂಧಿ

ಶ್ರೀ ಚಿದಂಬರ ಪುರುಷಾ ವಾಚಾಮಗವ್ಯನೆ ।
ಆಚಾರ ಮೋಕ್ಷದಾಯಕನೆ । ಧನ್ಯರಿಗೆ ।
ಗೋಚರಿಸುವಭವಾ ಮತಿಡೋರು ॥ ೧ ॥

ಬಂದ ಬಿಯಗಗವನ ಮಂದಿ ಬಾಂಧವರಿಗೆ ।
ಮಿಂದುಂಡು ಹರುಷವಡೆವಂತೆ । ವೃಷಭನಾ ।
ನಂದದಿಂದುಲುಪಿ ಗೊಡಿಸಿದ ॥ ೨ ॥

ಧಾರೆಯೆರೆಯದ ಮುನ್ನ ಬಾರನು ಮನೆಗೆಂದು ।
ಆರೈಯುತವನ ಮನೆಯಲ್ಲಿ । ಬಿಯಗನಿ– ।
ಗೋರಂತೆ ತೃಪ್ತಿವಡೆಸಿದನು ॥ ೩ ॥

ಕಚ್ಛರಾಜನು ಮಹಾ ಕಚ್ಛ ಸೋಮಪ್ರಭನು ।
ಹೆಚ್ಚಿನ ನೃಪರು ಮನೆಗೆಯ್ದಿ । ದಿವಿ ನೃಪಗೆ ।
ಉತ್ಸಾಹ ಮಾತನುಸುರಿದರು ॥ ೪ ॥

ಏಳೆಂಟು ದಿನ ಹೋದ ಮೇಲೊಂದು ರಾತ್ರಿಯಲ್ಲಿ ।
ತಾಳಿಬಂದಿಯನು ಹದುಳಿಸುವ । ಮಂಗಲಕೆ ।
ವೇಳೆ ದೋರಿದನು ವೃಷಭೇಶ ॥ ೫ ॥

ದಿವಿರಾಜನರಮನೆಗೆ ವಿವಿಧ ಭೂಷರ ಕಳುಹಿ ।
ತವೆ ತಾಳಿಬಂದಿಯೊಸಗೆಯ । ಮಾಡಿಸಿದ ।
ಭುವನ ಭಾಷೆಂದು ಹೊಗಳಿತು ॥ ೬ ॥

ಬೆಳಗಾಗೆ ಪ್ರಾಪ್ತರ ಕಳುಹಿ ಮಂಗಲಕಿಂದು ।
ತಳುವ್ರದುತ್ಸಾಹವ ತೊಡಗೆಂದು । ದಿವಿ ನೃಪಗೆ ।
ತಿಳಿಸೆ * ಹೇಳಿಸಿದ ವೃಷಭೇಶ ॥ ೭ ॥

---
* ಯೆಳಸಿ

ಹತ್ತನೆಯ ದಿನದಿರುಳು ಉತ್ತಮೋತ್ತಮ ಲಗ್ನ ।
ಬಿತ್ತರದೊಳಿಂದು ಮೊದಲಾಗಿ । ವಿಭವದಿ ಸಂ- ।
ಪತ್ತು ಸಾಲಲೆಂದು ಕಳುಹಿದರು ॥ ೮ ॥

ಮನವುಬ್ಬಿ ದಿವಿರಾಜ ವಿನಯದಾಸ್ತರ ಕಳುಹಿ ।
ಮನೆಗೆಯ್ದಿ ತನ್ನ ಮಡದಿಗೆ । ಪೇಳಿದ ನಂ- ।
ದನೆಯ ಸಿಂಗರಿಸಲನುವಾಗೆ ॥ ೯ ॥

ಮಜ್ಜನ ಮಾಡಿಸಿ ಸಜ್ಜನರಾನಂದಕೆ ।
ಉಜ್ಜುಗದ ಪೆಂಗಳೊಡಗೂಡಿ । ಸಿಂಗರವ ।
ಪಜ್ಜಳಿಪ ಕನ್ನೆಯರೆಸಗಿದರು § ॥ ೧೦ ॥

ನೆರೆ ಪುಷ್ಪ ಬಣಕೆ ಜಗರಿಗಟ್ಟುವಂದದಲಿ ।
ನರುನುರುಯೆಂಬ ಹೊಳಹಿನ । ಸೀರೆಯಾ ।
ನಿರಿವಿಡಿದಾಕೆಗುಡಿಸಿದರು ॥ ೧೧ ॥

ಸೆಳೆನಡುವಿಗೆಡೆಂದತ್ತತ್ತ [?] ಕೆಳ ಕೆಳ ತರಹಾಗಿ ।
ಯೆಳೆಯಳುಟ್ಟುಡುಗೆ ಮೆರೆದುದು । ದುಮ್ಮತ ಹೂವ [?] ।
ತಳಮೇಲು ಮಾಡಿ ಪಿಡಿದಂತೆ ॥ ೧೨ ॥

ಮೊಗವೆಂಬ ಚಂದ್ರಮಗೆ ಸೊಗಸಿದ ರಾಹುವನು ।
ನೆಗೆದಾಡೆ ಕಜ್ಜಳವಿಪ್ಪಂತೆ । ಮುಡಿಗಟ್ಟಿ ।
ಸೊಗಸು ಮಾಡಿದರು ಸತಿಯರು ॥ ೧೩ ॥

ಕುಂತಳೆಂದರೆಯಾಕೆಯ ಜೋತುದು ಹಿಮ್ಮಡ ಮುಟ್ಟಿ ।
ಕುಂತಳವತಿಗೆ ಗುಣನಾಮ । ತುರುಬಿಹುದು ।
ಕಂತುವಿನ ಕಡೆಯ ಹರಗೆಯ ॥ ೧೪ ॥

ಮುತ್ತಿನ ಬಳೆ ಚೆನ್ನ ಮುತ್ತಿನ ಪಿರಿ ತೊಂಡಿಲು ।
ಮುತ್ತಿನ ಬೈತಲೆಯು ಮೆರೆವಾಗ । ನಕ್ಷತ್ರ ।
ಕತ್ತಲೆಯೊಳೆಸೆವ ತೆರನಾಯ್ತು ॥ ೧೫ ॥

§ ಕನ್ನೆಯರೆಳಸಿದರು

ಮಕರಿಕ ಪತ್ರವನು ರಚಿಸಿದರು ಗಲ್ಲದಲ್ಲಿ |
ಚಕಚಕಿಪ ಬೊಟ್ಟು ಹರಳೋಲೆ | ಮೂಗುತಿಯ |
ಸಖಿಗೆ ಕಾಡಿಗೆಯ ರಚಿಸಿದರು || ೧೬ ||

ಕೊರಳಲ್ಲಿ ಮುತ್ತಿನ ಸರ....ಒಪ್ಪಿರಲು |
ಉರದ ಹೊರಲುಳಿಪದಕವು | ಅಲೆಯುಲು ಸಿಂ |
ಗರವ ಮಾಡಿದರು ಚೆಲುವಾಗೆ || ೧೭ ||

ಬಳೆ ಕಂಕಣವುಂಗುರವು ತೋಳೋಳೆಸೆಯೆ ಭುಜಕೀರ್ತಿ |
ನಳನಳಿಸುವ ಹಸ್ತಕಡಗವ | ಗೌಳಸರದಿಂದ |
ನಳಿತೋಳೋಳೆಸೆವ ಸತಿಗಂದು || ೧೮ ||

ಸೆಳೆ ನಡುವಿನ ಚಿಂತಾಕು ತೊಳತೊಳವ ಕಟಿಸೂತ್ರ |
ಉಲಿವಂದಿಗೆಗಳು ತಳತಳಿಪ | ಪೆಂಡೆಯದಿಂದ |
ಲಲನೆ ಸಿಂಗರಿಸಿ ಮೆರೆದಳು || ೧೯ ||

ವೀರ ಮುದ್ರಿಕೆ ಪಿಲ್ಲಿ ಸಿರಿ ಮಿಂಚಿಟ್ಟುಗುರು |
ಅಚ್ಚಕೆಂಪಿನ ಮೈಗೆ ಪಚ್ಚೆಯ ರವಕೆಯು | ರತಿಯೊಡನೆ |
ಮಚ್ಚರಿಸುವಂತೆ ಮೆರೆದಳು || ೨೦ ||

ನವರತ್ನ ಭೂಷಣವ ಯುವತಿಗೆ ಸಿಂಗರಿಸಿ |
ಇವಳು ಮಾಣಿಕದ ಪ್ರತಿಮೆಯೊ | ಸುರಪತಿಯ |
ಛವಿ ಮಿಕ್ಕುದಾ ಹಾಗಾಯೆನಿಸಿದಳು || ೨೧ ||

ಆಭರಣವನನುಗೊಳಿಸಿ ಶೋಭೆಯೊಳಾರತಿಯೆತ್ತಿ |
ಶ್ರೀ ಭರತೇಶನಿಗೆಣೆಯೆಂದು | ಜಯವೆಂದು |
ಸೋಭಾನದಿ ಸೇಸೆ ತಳೆದರು || ೨೨ ||

ಕನ್ನಡಿಯ ತೋರಿದರೆ ಚೆನ್ನೆ ವೀಳೆಯಗೊಳುತ |
ಮುನ್ನಿಟ್ಟು ನೋಡೆ ನಸುನಕ್ಕು | ನಂದಕಿಯ |
ಮನ್ನಿಸಿ ಹರುಷದೊಳಿರುತಿಹಳು || ೨೩ ||

ಲಲನೆ ಸಿಂಗರವಾಗಿ ಸುಲಭ ವಿಭವದೊಳಿರಲು
ಚಲುವ ಭರತೇಶನನುವರಿದು । ಕೆಳೆಯರು ।
ನಲಿದು ಸಿಂಗರವನೆಸಗಿದರು ॥ ೨೪ ॥

ಸೆರಗು ತೋರ್ಯಸೆವ ಕಾಸೆ ತುರುಬು ಚಿಮ್ಮುರಿ ಚುಂಗು ।
ಮೆರೆದು ವಬ್ಬ [?] ನೆರೆ ಹೊರೆದದು । ಸೆರಗಿಳಿದು ।
ದೊರೆ ಮೋಡಿಯಲ್ಲಿ ಮೆರೆದನು ॥ ೨೫ ॥

ಪಿಂಗಿಲೊತ್ತಿದ ಪನ್ನೆ ರಂಗಿನ ಗೊಂಡಿಲು ವಂಚ ।
ಮಂಗಲ ಕಸ್ತೂರಿಯ ಕಿರಿಬೊಟ್ಟು । ಮೆರೆಯಲು ।
ಸಿಂಗಾರದೊಡೆಯ ಮೆರೆದನು ॥ ೨೬ ॥

ಹೊರಲುಳಿಯು [ವ] ಹಸ್ತ ಕಡಗವ ಓರಂತೊಪ್ಪುವ ಪದಕವ ।
ಸಿರಿ ಮುತ್ತಿನಲಿ ರಚಿಸಿದ । ಜನಿವಾರ ।
ರಾಜೇಂದ್ರಗೆಸೆದು ಮೆರೆದವು ॥ ೨೭ ॥

ಬಾಪುರಿ ತೋರರುಳಿಲಿ ತಾಲೆಯ ವ್ಯಾಪದ ಕಂಕಣ ಕಡಗವ ।
ರೂಪಕ ದುಂಗರವು ಸರಪಣಿ । ಕೈಯೊಳೆಯಿಂದ ।
ಭಾಪು ಲೇಸೆನಿಸಿ ಮೆರೆದನು ॥ ೨೮ ॥

ನಡುವಿನ ದೊಡ್ಯಾಣ ಗೊಂಡೆಯ ಹೊನ್ನುಡಿದಾರ ।
ಪೆಂಡಿಯುವು ಪಾದಸರದಿಂದ । ಪುಷ್ಪ ಕೋ- ।
ದಂಡಜಿತ ಮೆರೆದನು ॥ ೨೯ ॥

ಮಿಂಚಿನುಂಗುಷ್ಟವು ಕೋಲ್ಮಿಂಚೂಡಿದಲತಗೆಯು ।
ಮಿಂಚು ಹಾವುಗೆಯ ಮಿಗೆ ಮೆಟ್ಟಿ । ಮಿರುಮಿರನೆ ।
ಮಿಂಚುತೊಪ್ಪಿದನು ಮದುವನಿಗ ॥ ೩೦ ॥

ಸೋಜಿಗ ಸಿಂಗರವನು ರಾಜಸಿಂಗರವಾಗಿ ।
ಈ ಜಗ ಚೆಲುವಿನೊಡೆಯನು । ಚಲುವಿಂದ ।
ಮೂಜಗವ ಗೆಲುವನೆನಿಸಿದನು ॥ ೩೧ ॥

ಪತಿಯ ಮಹಿಮೆಯ ಕೇಳ್ದು ಮತ್ತಲ್ಲಿ ನಲಿಯುತ ।
ಸತಿಯರೊಗ್ಗಿನಲಿ ವಿಭವದಲ್ಲಿ । ಕುಂತಲಾ- ।
ವತಿ ಪಿತ್ರನ ಮನೆಯೊಳಿರುತಿಹಳು ॥ ೪೮ ॥

ದಶದಿನದಿರುಳಿನಲ್ಲಿ ಕುಶಲದ ಸುಮುಹೂರ್ತದಲ್ಲಿ ।
ಸೊಸೆಯು ಬರಲೆಂದು ವೃಷಭೇಶ । ಕಳುಹೆ ಸಂ- ।
ತ್ರಸ ಪಡೆದಿರ್ದ ದಿವಿರಾಜ ॥ ೪೯ ॥

# ಧವಲ ಶೋಭನ

ಶ್ರೀ ಭರತೇಶ್ವರಗೊಲಿದು ।
[ಆ] ಭವವಿತ್ತ ಮಹಾತ್ಮ ।
ಶೋಭನ ಮತಿದೋರೆನಗೆ ನಿರಂಜನ ಸಿದ್ಧ ॥ ೧ ॥

ಕನ್ನೆಗೂ ಕನ್ನೆಯ ತಾಯಿಗೂ ।
ಪನ್ನಂಗ ಪಲ್ಲಕ್ಕಿ ।
ಬಿನ್ನಣವಡೆದಿರೆ ನಡೆವರು ಧವಲವ ಪಾಡಿ ॥ ೨ ॥

ದೊರೆದೊರೆಗಳು ನಾಯಕರು ।
ಪರಿವಾರ ಗಜ ತೇಜಿ ।
ಸಿರಿಠಕ್ಕೆಯ ಪಾಜಿನೊಳೆದ್ದನು ದಿವಿರಾಜ ॥ ೩ ॥

ಕಾಳಿ ಪಿನಾಕಿಯು ನಪಿರಿ ದೋಳು ।
ಮೃದಂಗ ಬೊಂಬುಳಿಯು ।
ಸೂಳೈಸುವ ತ್ರಮ್ಮಟಿ ಭೇರಿಯೊಳಡಿಯಿಟ್ಟ ॥ ೪ ॥

ಚಿನ್ನ ಬೆಳ್ಳಿಯ ಪುಷ್ಪದಲಿ ।
ಮುನ್ನೆರಡು ಬಲವಿಟ್ಟಡಿ ।
ಸನ್ನಿಧಿವಡೆದು ಬಲವಾಗಿಯೆ ನಲಿದೆಯ್ದಿದರು ॥ ೫ ॥

ಮದುವೆಯ ಮಂಟಪಕೆ ।
ಸಡಗರದಿ ಪಜ್ಜೆಯಿಡುವಾಗ ।
ಇದಿರ್ಗೊಂಡನು ಸೋಮಪ್ರಭ ರಾಜವರನು ॥ ೬ ॥

ಪಟಹ ಚಿಂಗು ನಿಸ್ಸಾಳ ।
ಪಿಟ್ಟ(?) ಯೊದರಿ ಸುಂದರಿಯರ ಪಲ್ಲಕ್ಕಿ ।
ವೃಂದಮೊಳೊಳಪೊಕ್ಕರು ಮದುವೆಯ ಮಂಟಪಕೆ ॥ ೭ ॥

ಭಾನುರಾಜನು ಕಚ್ಛೇಂದ್ರನು |
ಮಾಸಿತ ಮಂತ್ರದ ದ್ವಿಜರು |
ಸನುಮತದಿಂದನೊಳಪೊಕ್ಕ ದಿವಿರಾಜ || ೮ ||

ಮುತ್ತಿನ ಮೆಟ್ಟಕ್ಕಿಯಲಿ |
ಮೆತ್ತನೆ ನಿಂತಳು ಕನ್ನೆ |
ಮತ್ತೆ ಧವಲವ ಪಾಡುತಿದ್ದರು ಕೆಳದಿಯರು || ೯ ||

ಆತಗಾತಗಯ್ಯನಿಗೆ |
ಧವಲದ ಹಾಡ ಹೇಳುತ |
ಉತ್ತಮದ ಒಲವ ಪಾಡುತಿದ್ದರು ಕೆಲಕೆ ಬಂದನು ಭರತೇಶ|| ೧೦ ||

ಶೃಂಗಾರವೆ ನೃಪನಾಯ್ತೊ |
ತುಂಗ ಮೋಹನ ವಿಭುವಾಯ್ತೊ |
ತಿಂಗಳ ಬಿಂಬವೋಲೆನಲಾಯ್ತೊಯ್ಯನೆ ನಡೆತಂದ || ೧೧ ||

ಎರಡು ಮೆಟ್ಟಕ್ಕಿಯನು |
ನೀರೆಯಿದ್ದಳು ತೆರೆಯಾಚೆ |
ಕಿರಿ ಭೂಸುರರೋದಿದರು ಮಂಗಲಾಷ್ಟಕವ | ೧೨ ||

ಶ್ರೀಯುತ್ ಮಂತ್ರವನೋದಿ- |
ದಾಯದಿ ಸೇಸೆಯನಿಡುತ |
ಆಯತವೆಯೆನಲಾಯತವೆಂಬರು ಕೆಲರು || ೧೩ ||

ಸದಮಲ ಮಂತ್ರಾಕ್ಷತೆಯ |
ಮದುಮಕ್ಕಳಿಗೊಲಿದಿಡುತ |
ಪದದಾಯತವೆಯೆನಲಾಯತವೆನುತಿಹರು || ೧೪ ||

ತೆರೆ ತೊಲಗಿತು ಕ್ರಮದಿಂದ |
ವರ ಪುತ್ರಿಯ ಕೈಯಿಂದ |
ಭರತೇಶಗೆ ಮಾಲೆಯನಿಡಿಸಿದ ದಿವಿರಾಜ || ೧೫ ||

ಮುತ್ತಳಿಯನ ಹಸ್ತದಲಿ ।
ಸುತ್ತಣವರು ಜಯವೆನಲು ।
ಪತ್ತಿಸಿ ಪುತ್ರಿಯ ಹಸ್ತವನು ದಿವಿರಾಜ ॥ ೧೬ ॥

ಎಳೆಯ ಮಲ್ಲಿಗೆ ಮಲ್ಲಿಗೆಗೆ ।
ಸಲಿಸುತ ನೀರೆರೆವಂತೆ ।
ಸತಿಗಿಂಡಿಯನೆತ್ತಿ ಧಾರೆಯೆರೆದ ದಿವಿರಾಜ ॥ ೧೭ ॥

ಇದು ಷಟ್ಖಂಡದ ಸಿರಿಗೆ ।
ಮೊದಲ ಸಂಪುಟವೆಂದೆನಿಸಿ ।
ಮದುವಳಿಗೆಯ ಕೈಯವಿಡಿವನೊಲಿದು ಭರತೇಶ ॥ ೧೮ ॥

ಮುಂದಕೆ ನಡೆದು ।
ಸುಂದರಿಯುಂಗುಲಿವಿಡಿದು ।
ಬಂದು ಹೋಮವ ಬಲಗೊಂಡನು ಮದುವಣಿಗ ॥ ೧೯ ॥

ಮಂದರವನು ಸತಿಗೂಡಿ ।
ಚಂದಿರ ಬಲಗೊಂಬಂತೆ ।
ಅಂದು ಹೋಮವ ಬಲಗೊಂಡನು ನಲ್ಲಳವೆರಸಿ ॥ ೨೦ ॥

ಗಜತೇಜದ ಈ ಪೆಣ್ಣಾನೆ ।
ಋಜುಮಾರ್ಗದಿ ಹೋಹಂತೆ ।
ನಿಜಪತಿಯೊಡನೋಜೆಯೊಳೆಯ್ದಿದಳಂಬುಜಾಕ್ಷಿ ॥ ೨೧ ॥

ಪಂಚಮದಿನದುದಯದಲ್ಲಿ ।
ಮಿಂಚು ಮೆರೆಯೆ ಶೃಂಗರಿಸಿ ।
ಅಂಚೆಗಮನೆವೆರಸಯ್ಯನ ಕಾಣ್ಬೊಡೆ ನಡೆದ ॥ ೨೨ ॥

ಪಡೆದ [ವೀ]ರ ಮೊಗಗಾಣ್ಬುದ[ಕೆ] ।
ತೊಡಗಿತಾತಗೆ ಕಡುಲಜ್ಜೆ ।
ಮಡದಿವೆರಸಿನಲಿ [ಸಿಗ್ಗಾಗೆ] ನಮಿಸಿದ ॥ ೨೩ ॥

ಬೆಳಗಾಯ್ತು ಬೆಳಗಿನೊಳು ।
ಗೆಲವಿಂದರೆ ಕಣ್ದೆರೆದು ।
ಜಳಕವ ಮಾಡಿ ಸಿಂಗರಿಸಿದರುಚಿತಾರ್ಥದೊಳು || ೨೪ ||

* * * *

ಭರತೇಶನ ಶೋಭನವ ಸ್ಮರಿಸಿದರೆ ಸುಖವಕ್ಕು ।
ಸಿರಿಯಕ್ಕು ಪುಣ್ಯ ಘನವಕ್ಕು । ಜಯವಕ್ಕು ।
ಗುರುಹಂಸನಾಥನೊಲವಕ್ಕು || ೭೪ ||

## ಕಲ್ಯಾಣದ ಶೋಭನ ಸಂಧಿ ಸಮಾಪ್ತ

---

# ಅಂತ್ಯಮಂಗಲಕಲ್ಯಾಣ ಸಂಧಿ

ಹಿಂದಿಷ್ಟು ದೂರದಲಿ ಕೈಯೊಂದಾಗಿ ಬಹುದೆಂದು |
ನಂದಕಿಗೆ ಪೇಳ್ದು ಭರತೇಶ | ತಾಮುಂದೆ |
ತಂದೆಯರ ಮನೆಗೆ ನಡೆದನು ॥ ೧ ॥

ಧವಲ ಶೋಭನಗಳ ಯುವತಿಯರು ಪಾಡುತಿರೆ |
ಭವನದೊಳು ಹೊಕ್ಕು ಜನಕಗೆ | ಕಾಣಿಕೆಯಿಕ್ಕಿ |
ಪವಣಿಸಿ ಪಚ್ಚೆಗೆರಗಿದನು ॥ ೨ ॥

ಭಾಗ್ಯೋದಯವಾಗೆಂದು ಬೀಗಿ ಹರಿಸಿದನಯ್ಯ |
ಭೋಗಿ ತಾಯಿಗಳಿಗೆ ನಮಿಸಿದನು | ಸ್ಥಿರಸುಮ- |
ಯಾಗೆಂದು ತೆಗೆದಪ್ಪಿ ॥ ೩ ॥

ಹರುಷದಿ ಕುಳಿರ ಕೊಡಿಸೆ ಭರತೇಶ ಕುಳಿತನು |
ಪರಮ ಸಂತೋಷವಾಗೆಂದರಿಗೆ | ಮಗನಿಷ್ಟು |
ಸಿರಬಾಗಿ ಲಜ್ಜೆಯೊಳಗಿದ್ದ ॥ ೪ ॥

ಶೋಭನ ಲಾಲಿಸುತ ಶೋಭೆಯ ನೋಡುತ ಮಗನ |
ವೈಭವವಾರ್ತೆ ನುಡಿಯುತ | ಪಡೆದವರು |
ಸೌಭಾಗ್ಯಗೋಷ್ಠಿಯೊಳಿರುತಿಹರು. ॥ ೫ ॥

ಅಯ್ಯನುಡುಗೊರೆಯಿತ್ತಾರಯ್ಯದೆ ತಾಯಿಗಳು |
ಕೈಯಾರೆ ಕೊಟ್ಟುಂಡು ಮಗನಿರಲು | ಸೊಸೆ ಬಂದ- |
ಳೊಯ್ಯನೆ ಮಾವನರಮನೆಗೆ ॥ ೬ ॥

ನಾರಿ ಸಾರಿದ ಮುನ್ನ ಭೋರನೆ ಪಡೆದವರ್ಗೆರಗಿ |
ದಾರಿ ಮೆಟ್ಟಿದ ಭರತೇಶ | ಮಗನ ಗಂ- |
ಭೀರಕೆ ಹಿಗ್ಗಿ ನಗುತಿಹರು ॥ ೭ ॥

ಆಳುಕು ತೋಚೆಯೊಳೆಯ್ದಿ ಕುಲಕನ್ನೆ ಮಾವನಿಗೆ |
ಸಲೆ ಕಾಣಿಕೆಯಿಕ್ಕಿ ನಮಿಸಿದಳು | ಸೌಭಾಗ್ಯ |
ನೆಲಸಿ ಬಾಳೆಂದು ಹರಸಿದನು ॥ ೮ ॥

ನಂದಕಿ ಸೂಚಿಸೆ ಮುಂದಿದ್ದತ್ತೆಯರಿಗೆರಗಿದಳು |
ಅಂದಪ್ಪಿ ನಮ್ಮ ಮಗನಿಗೆ | ಮನವರ್ತಿ- |
ಸಂದು ಬಾಳೆಂದ ಹರಸಿದರು ॥ ೯ ॥

ಮುಂವೆ ಕುಳಿರ ಕೊಡಿಸೆ ನಿಂದು ತಲೆ ಕುಸಿದಾಕೆ |
ಬಂಧವರ ಮಾವನಿದಿರಲ್ಲಿ | ಭಯ ತಮ್ಮ |
ಹಿಂದಿರಿಸಿ ಕುಳಿತಳನುವರಿದು ॥ ೧೦ ॥

ಲಾವಣ್ಯ ಗಂಭೀರ ಲಕ್ಷಣವನು |
ಮಾವನು ಮಾವನರಸಿಯರು | ಮಿಗೆನೋಡಿ |
ಭಾವದೊಳಿಹರು ಹಡೆದವರು ॥ ೧೧ ॥

ನೋಡಿತು ಹಿರಿದವರು ನೋಡವಿಸ್ತ್ರಯೆಂಬರು |
ನೋಡಲಪ್ಪುವರು ನಗುವರು | ಸೊಸೆಯನು ಮು- |
ದ್ದಾಡಿಸುತತ್ತೆಯರು ನಲಿದರು ॥ ೧೨ ॥

ತತ್ತಾ ಲಜ್ಜೆಯ ಕಂಡು ಹೊತ್ತರಿತು ಸಾಕೆಂದು |
ಅತ್ತೆ ಮಾವಂದಿರುಡುಗೊರೆಯ | ಸೊಸೆಗಿತ್ತು |
ಹೊತ್ತವೆಣ್ಣರಸಿ ಕಳುಹಿದಳು ॥ ೧೩ ॥

ಓಜೆಯಿಂದತ್ತೆ ಮಾವಾಜಿಯರಿಗೆರಗಿಪ |
ಸೌಭಾಗ್ಯ ಗೋಷ್ಠಿ ನೆರೆಮಾಡೆ | ಭರತೇಶ- |
ಗೀ ಜಾಣೆ ತಕ್ಕಳೆನುತಿಹರು ॥ ೧೪ ॥

ಸುರದೇವಿಗೆ ದಿವಿನೃಪಗೆ ವರಭಾನುರಾಜನಿಗೆ |
ನೆರೆದ ನೆಂಟರಿಗೆ ವೃಷಭೇಶ | ತನ್ನ ಮಂದಿಗೆ |
ಔತಣವ * ಸಲಿಸಿದ ಮುದದಿಂದ ॥ ೧೫ ॥

---

* ಅವುತಳವ

ಪ್ರೇಮವಚನವ ನುಡಿದೆಲ್ಲರಿಗೆ ಸೋಮದಂಗವನಿತ್ತು ।
ಸ್ವಾಮಿ ಬೀಳ್ಕೊಡಲು ಸತಿಯರು । ಸುರದೇವಿ- ।
ಗಾಮೋದ ದೊ[ಳು] ಕಳುಹಿದರು. ॥ ೧೬ ॥

ದ್ವಿಜರಿಗೆಂವವನಿಗೆ ವ್ರಜದಾನಗಳ ಕೊಟ್ಟು ।
ಪ್ರಜೆ ಪರಿವಾರಕುಣಲಿಕ್ಕಿ । ವೃಷಭೇಶ ।
ಸೃಜಿಸಿ ಮತ್ತಿತ್ತನುಚಿತವ. ॥ ೧೭ ॥

ಪಟ್ಟಣ ಸನ್ಮಾನವಾಯ್ತು ಭಟ್ಟರು ಕವಿ ಗಮಕಿಗಳು ।
ನೆಟ್ಟನೆ ತಣಿದು ನಿಜಕೀರ್ತಿ । ತ್ರಿಜಗವ ।
ಮುಟ್ಟಿತಾದೀಶಗೆಣೆಯುಂಟೆ? ॥ ೧೮ ॥

ಅರದಿಂಗಳು ದಿವಿರಾಜ ಮೆರೆವಯೋಧ್ಯಾ ಪುರವಲ್ಲಿ ।
ತುರುಗಿದುತ್ಸಾಹದೊಳಗಿದ್ದು । ತನ್ನೂರ್ಗೆ ।
ನೆರಿ ಸುಖ.ಣವಾದನೊಲವಿಂದ. ॥ ೧೯ ॥

ದೇವನಿಗೆ ದೇವನ ದೇವಿಯರಿಗುಚಿತವ ।
ತೀವಿತಾಗಿತ್ತ ತನಗವರು । ಕೊಡೆ ತನ್ನ ।
ದೇವಿಯು ತಾನಿಂತು ತೆರಳಿದರು. ॥ ೨೦ ॥

ಅಳಿಯಗುತ್ತಮ ವಸ್ತುಗಳ ಕೊಟ್ಟು ಮಗಳಿಗೆ ।
ಬಳಿವಳಿಗೊಟ್ಟು ಮೊಗನೋಡೆ । ಸಖಿಯಳ ।
ಪಡೆದರ ಕಳುಹೆಯುಡುಗೊರೆಯ ॥ ೨೧ ॥

ಆಂದದಿ ಬಾಳೆಂದಪ್ಪಿ ನಂದಕಿಯನೊಡಸೀಗ ।
ಮುಂದವರು ನೋಡೆ ನಡೆವಾಗ । ಪಡೆದರಿಗು ।
ಪಿಂದಣ ಮಗಳು ಗುಳುಗುಳನೆ ॥ ೨೨ ॥

ಪುತ್ರನ ಪಡೆವುದು ಲೇಸು ಪುತ್ರಿಯ ಪಡೆವುದು ಪೊಲ್ಲ ।
ಧಾತ್ರಿಯೊಳೆಂದು ನೆನೆಯುತ್ತ । ಮುಂದವರು ।
ಸೂತ್ರಿಸಿದಂತೆ ತೆರಳಿದರು. ॥ ೨೩ ॥

ಪುರದ ವಿದ್ವಾಂಸರಿಗೆ ಊಳಿಗದವರಿಗೆ |
ಕರೆಕರೆದು ಕೊಟ್ಟ ದಿವಿರಾಜ | ಪುರದಣೆದು |
ಪುರೆಯಿಟ್ಟು (?) ಹೊಗಳಿತಖಿಳೂರ್ವಿ || ೨೪ ||

ತನ್ನ ಪ್ರಜೆ ಪರಿವಾರ ತನ್ನ ಬಾಂಧವರೆಲ್ಲ |
ತನ್ನೊಡನೆ ಬರಲು........ | ದಿವಿರಾಜ |
ತನ್ನೂರ ಹೊಕ್ಕ ಸುಖದಲ್ಲಿ || ೨೫ ||

ಆ ಮದುವೆ ಸ್ವಾಮಿಯ ಪುತ್ರನಿಗೆ ಪ್ರೇಮದಿ |
ಮತ್ತೆ ಮರುವರುಷ ನೆಗಳ್ದರು | ಕಲ್ಯಾಣವ |
ನೇಮಿ [ಸಿ] ತನ್ನ ಹೊಗಳರಿಯೆ. || ೨೬ ||

ಸಂಚಿತ ಕ್ಷತ್ರಿಯರಲ್ಲಿ ಮಿಂಚಿನ ಲತೆಯಂತೆಸೆವ |
ಪಂಚ ಕನ್ನಿಕೆಯರೊಡನಂತೆ | ಪುರುಸುತಗೆ |
ಪಂಚ ಕಲ್ಯಾಣ ತೊಡಗಿದರು. || ೨೭ ||

ಲತೆಯಂತೆಸೆವ ನಾದನದೇವಿ ಸುಮುಕರಾಜಿ |
ಶ್ರೀದೇವಿ ಸೊಬಗಿನ ಮಕರಾಜಿ | ಮಿಗೆ ಚಂದ್ರಿ- |
ಕಾದೇವಿಯೆಂಬಳೈವರು || ೨೮ ||

ಅಂತವರೊಳು ತೋರ್ಪಾನಂತ ಸೇನಾದೇವಿ |
ಮುಂತೆ ಮರೀಚಿಯೆನಿಪೊಬ್ಬ | ಪುತ್ರನ |
ಸಂತಸದಿ ಪಡೆದಳು ಸುಖದಲ್ಲಿ || ೨೯ ||

ನಗರಿ ಸಿಂಗರವಾಗೆ ಮಿಗೆ ಹೋಮ ಸಾಕ್ಷಿಯಲಿ |
ನಗೆಮೊಗದ ಹೆಂಗಳೈವರನು | ಭರತೇಶ |
ನಗುತ ಕೈಪಿಡಿದನೊಸಗೆಯಲ್ಲಿ. || ೩೦ ||

ಅಂದಿನ ಮದುವೆಯ ತೆರದಿ ಸಂದವು ಸಕಲುತ್ಸವ |
ಮಂದಿರವ ಹೊಕ್ಕು ಸುಖನಿದ್ದ | ನೆಂಬೆನು |
ಸಂದಿಸಿ ಕೊಸರುತಿರಲಿಕೆ || ೩೧ ||

ಪ್ರವರ ಮಂಗಲವಾಗೆ ವಿವಿಧ ಭಾಗ್ಯವನಿತ್ತು |
ಯುವರಾಜನೆಂದು ಮಗನಿಗೆ | ವೃಷಭೇಶ |
ನವ ಪಟ್ಟಗಟ್ಟಿ ನಿಲ್ಲಿಸಿದ. ‖ ೩೨ ‖

ಪಿತನು ಸಾಮ್ರಾಜ್ಯದಲ್ಲಿ ಸುತನು ಮುಂದಳ ರಕ್ಷಿ |
ಕ್ಷಿತಿಯ ಪಾಲಿ[ಸು]ತ ಸುಖವಿರಲು | ಪುತ್ರರ ಗೂಡಿಯೂ- |
ರ್ಜಿತವಾಗುತಿರಲಿ ಸತಿಮುಂದೆ ‖ ೩೩ ‖

ತಿಂಗಳು ದಿನದಿನಕೆ ಸಂಗದ ಸಿರಿ ನೆರೆವಂತೆ |
ಮಂಗಳ ವೆಗ್ಗಳಿಸಿತೂರಲ್ಲಿ | ಸಲಲಂತ್ಯ |
ಮಂಗಳದ ಪರಮ ಶೋಭನ ‖ ೩೪ ‖

ಭರತೇಶನ ಮಂಗಳವ ಸ್ಮರಿಸಿದರೆ ಸುಖವಕ್ಕು |
ಸಿರಿಯಕ್ಕು ಪುಣ್ಯಘನವಕ್ಕು | ಜಯವಕ್ಕು |
ಗುರು ಹಂಸನಾಥನೊಲವಕ್ಕು ‖ ೩೫ ‖

— ಅಂತ್ಯ ಮಂಗಲ ಕಲ್ಯಾಣ ಸಮಾಪ್ತ —

# ಶಬ್ದಕೋಶ

[ ಸೂಚನೆ:— ಮೊದಲನೆಯ ಸಂಖ್ಯೆ ಸಂಧಿಯನ್ನೂ ಎರಡನೆಯ ಸಂಖ್ಯೆಯು ಪದ್ಯ ಸಂಖ್ಯೆಯನ್ನೂ ಸೂಚಿಸುತ್ತದೆ. ]

**ಅ**

ಅಯ್ಯ (೧–೧೩) ತಂದೆ
ಅರ್ಥಿ (೧–೫೪) ಪ್ರೀತಿ
ಅನುಪರಿದು (೪–೧೦) ವೇಳೆ ತಿಳಿದು
ಅಂದಳ (೧–೨೬) ಪಲ್ಲಕ್ಕಿ

**ಆ**

ಆದಿಬ್ರಹ್ಮ (೧–೭) ಋಷಭದೇವ, ಆದಿತೀರ್ಥಂಕರ
ಆಯತ (೩–೧೩) ಯೋಗ್ಯ
ಆರಯ್ಯ (೩–೩) ವಿಚಾರಿಸು
ಆರೋಗಣೆ (೨–೫೧) ಊಟ

**ಉ**

ಉಲುಪೆ (೨–೨೮) ಅಡಿಗೆಯ ಸಾಮಗ್ರಿ

**ಒ–ಓ**

ಒಗ್ಗಿನಲಿ (೨–೬೯) ಜೊತೆಯಲ್ಲಿ
ಓರಂತೆ (೩–೩) ಚೆಂದ

**ಕ**

ಕಲ್ಯಾಣಿ (೧–೫೦) ಸುಂದರ ಸ್ತ್ರೀ
ಕಳವೆ (೨–೫೨) ನೆಲ್ಲು, ಭತ್ತ
ಕಾತರ (೧–೪೦) ಆತುರ, ತಳಮಳ
ಕುಚ್ಚ (೨–೩೩) ಗೊಂಚಲು
ಕುರುಕುರು (೨–೮೭) ಸಾವಕಾಶ
ಕುಂಚ (೧–೨೨) ಗೊಂಚಲು
ಕೂರ್ತು (೨–೧೧೬) ಪ್ರೀತಿಸಿ
ಕೆಲ (೧–೩೩) ಸಮೀಪ, ಪಕ್ಕ
ಕೊಸರು (೪–೩೧) ವಿಸ್ತರಿಸು, ವರ್ಣಿಸು.
ಕೊಂಡೆಯರು (೧–೨೭) ಚಾಡಿಕೋರರು, ಕುತ್ಸಿತರು
ಕಂಜಪ್ರಿಯ (೧–೫) ಸೂರ್ಯ
ಕಂಡಿಯಾ (೧–೨೨) ವೇಷ

**ಗ**

ಗಾಡಿ (೧–೩೫) ಸೌಂದರ್ಯ, ಸೊಬಗು
ಗುಂಜಾಭರಣ (೧–೫) ಗುಲಗುಂಜಿಯ ಸರ
ಗೌಳಿ (೨–೧೫)

**ಚ**

ಚವಿ (೩–೧೧) ಕಾಂತಿ, ಹೊಳಪು
ಚಂಬಕ (೨–೪೪) ಒಂದು ತರವ ಡೋಲು
ಚಿಂತಾಕು (೩–೧೯) ಒಂದು ಆಭರಣ
ಚಿಮ್ಮುರಿ (೧–೧೭) ಸೆಂಬಲೆ, ಹೊರಳಿಸಿ ಕಟ್ಟಿದ್ದು

ಚೋದ್ಯ (೨–೧೨೫) ಸೋಜಿಗ, ಆಶ್ಚರ್ಯ

ಜ

ಜಗರಿ (೩–೧೦) ಕವಚ, ಬಾಣಕ್ಕೇರಿಸುವ ಕವಚ

ಠ

ಠಕ್ಕೆ (೩–೩) ಧ್ವಜ, ಎಲೆಯ ಆಕಾರದ ಬಾವುಟ

ತ

ತದ್ಭವ ಮೋಕ್ಷಗಾಮಿ (೧–೨೯) ಅದೇ ಭವದಲ್ಲಿ ಮುಕ್ತನಾಗುವವ

ತರಹರದಿ (೭–೭೫) ಸಾವಕಾಶ, ಸಮಾಧಾನ

ತಳತಂತ್ರ (೨–೭೯) ಸೇನೆ

ತಳು (೨–೧೪) ಸಾವಧಾನಿಸು, ತಡಮಾಡು

ತಾಳಿ (೨–೭೧) ಮಂಗಳಸೂತ್ರ

ತೀರ್ಥೇಶ (೧–೭) ತೀರ್ಥಂಕರ, ಧರ್ಮಪ್ರವರ್ತಕ

ತುರುಗು (೪–೧೯) ದಟ್ಟಣೆ, ತುಂಬು

ತುಂಗ (೩–೧೧) ಶ್ರೇಷ್ಠ

ತುಬ್ಬ (೨–೨೩) ಶೋಧನೆ

ತೆತ್ತಿಸು (೨–೩೨) ಪೋಣಿಸು

ದ

ದಿವಿಜ (೧–೪೪) ದೇವತೆ

ನ

ನಿಚ್ಚ (೧–೨) ನಿತ್ಯ

ನಿರಂಜನ (೧–೫) ಪರಮಾತ್ಮ, ಪರಬ್ರಹ್ಮ

ನಿಸ್ಸಾಳ (೨–೪೧) ಭೇರಿ, ಡೊಳ್ಳು

ನಿಸ್ತರಿಸು (೭–೮೫) ತೆರಳು

ನೀರಾಜನ (೩–೩೭) ಆರತಿ

ಪ

ಪಸ್ಸಂಗ (೭–೮೦) ಪಲ್ಲಕ್ಕಿ, ಪಾವುಡ

ಪರಬೊಮ್ಮ (೧–೧) ಪರಬ್ರಹ್ಮ

ಪರಮಾನ್ನ (೭–೫೩) ಹಾಲು, ಪಾಯಸ, ಕೀರು.

ಪರಿದು (೧–೩೦) ಓಡಿ

ಪವಣಿಸು (೪–೭) ಜೋಡಿಸು, ಸೇರಿಸು

ಪ್ರವರ (೬–೩೨) ಸಂತಾನ, ಶ್ರೇಷ್ಠ

ಪಿಜ್ಜುಗೆ (೨–೩೮)

ಪಿನಾಕಿ (೩–೪೯) ಒಂದು ವಾದ್ಯ

ಪೀಲಿ (೧–೭೫) ನವಿಲುಗರಿ

ಪುಷ್ಪಕೋದಂಡ (೩–೨೯) ಕಾಮ

ಪುರ್ದಿಸು (೧–೧೭) ಸ್ಪರ್ಧಿಸು

ಬ

ಬಳಸು (೭–೪೦) ಸುತ್ತು, ಸುತ್ತುಗಟ್ಟು

ಬಿಯಗ (೭–೧೨೧) ಬೀಗ, ನೆಂಟ

ಬಿದ್ದಿಗರು (೭–೭೯) ಬೀಗರು, ನೆಂಟರು

ಬೀಗಿ (೧–೩೯) ಸಂತೋಷಪಟ್ಟು
ಬುಧರು (೧–೭೪) ಜಾಣರು, ಪಂಡಿತರು
ಚೆಲಿವೆಂಗಳು (೧–೩೧) ವೇಶ್ಯೆಯರು
ಬೊಂಬುಲಿ (೨–೪೪) ಒಂದು ಬಗೆಯ ತಮಟೆ
ಬೋನಗುಡುಕಿ (೨–೧೨೨) ಅನ್ನದ ಪಾತ್ರೆ
ಬಂಡಣಾಟ (೧-೨೭) ಕಾಳಗದ ಆಟ

**ಮ**

ಮಾಡ (೧–೩೦) ಉಪ್ಪರಿಗೆ
ಮಾರ್ತಂಡ (೧–೨೨) ಸೂರ್ಯ
ಮಿಸುನಿ (೧–೨೦) ಚಿನ್ನ

**ರ**

ರತ್ನತ್ರಯ (೧-೩) ಸಮ್ಯಕ್ ದರ್ಶನ ಜ್ಞಾನ, ಚಾರಿತ್ರ
ರಾಗಿಸಿದ (೨–೧೦೦) ಬಣ್ಣಹಚ್ಚಿದ,
ರಾಜಾನ್ನ (೨-೫೨) ಶ್ರೇಷ್ಠಅನ್ನ
ರುಜು (೩–೨೧) ಸತ್ಯ

**ವ**

ವಂಚ (೩-೨೬) ಸ್ವಲ್ಪ, ಒಂದಿಷ್ಟು
ವ್ರಜ (೪-೧೭) ಗೋಕುಲ, ಸಮೂಹ, ಗುಂಪು
ವಾಚಾಮಗಮ್ಯ (೩–೫) ಮಾತಿಗೆ ನಿಲುಕದ
ವಾಯಸ (೨–೪) ಕಾಗೆ
ವಿರತ (೧–೩೨) ತ್ಯಜಿಸಿದವ

**ಶ**

ಶಕ್ರ (೧–೬) ಇಂದ್ರ
ಶಮಿ (೨–೮) ಶಾಂತಿ, ಬನ್ನೀಮರ

**ಸ**

ಸಂಚಿತ (೪–೨೭) ಕೂಡಿದ
ಸತ್ತಿಗೆ (೨–೩೮) ಶ್ವೇತಛತ್ರ, ಬಿಳಿಯಕೊಡೆ
ಸದರ (೨–೭) ಸಲಿಗೆ
ಸವನಿಸು (೨–೯೨) ಅಣಿಮಾಡು. ಸಿದ್ಧಮಾಡು
ಸನ್ನಿಭ (೧–೮) ಸಮಾನ, ಹೋಲುವೆ
ಸಾಬ (೨–೫೫) ?
ಶಿವಾಗಾಮಿ (೧–೮) ಸುಖಕೊಡು ವಂಥ ಆಗಮಗಳನ್ನು ಬೋಧಿಸಿದವ, ತೀರ್ಥಂಕರ

**ಹ**

ಹದುಳ (೩–೫) ಕ್ಷೇಮ, ಶಾಂತ, ಶುಭ
ಹರೆಗೆ (೩–೧೪) ಹರಡು
ಹಡಪ (೧–೨೨) ತಾಂಬೂಲದ ಚೀಲ, ಚಂಚ
ಹೊರವಾರು (೧–೧೯) ನಿತಂಬಭಾಗ
ಹೊರೆಸಾರಿ (೧–೬೩) ವಿಸ್ತರಿಸಿ
ಹೊಳಲ (೨–೭೯) ಪಟ್ಟಣ

## ಕೆಲವು ಒಳ್ಳೆಯ ಪ್ರಕಟನೆಗಳು

## ನನ್ನ ಹಾಡು

**ಶ್ರೀ ಬ ಗಿ. ಯಲ್ಲಟ್ಟಿ ಅವರ ಉತ್ಕೃಷ್ಟ ಕವನಗಳ ಸಂಗ್ರಹ**

"ಗೀತಾಂಜಲಿಯಲ್ಲಿ ದಿವಂಗತ ಕವಿಸಾಮ್ರಾಟ್ ರವೀಂದ್ರನಾಥರು ಡಿದ ಗೀತಗಳ ಮಹಾಪಥದಲ್ಲಿ ಸ್ಪಷ್ಟ ಹೆಜ್ಜೆ ಇಟ್ಟಂಥವುಗಳು ಇವು"

— ಮಧುರಚೆನ್ನ

"ಶ್ರೀ ಯಲ್ಲಟ್ಟಿಯವರ ನೈಜಕವಿತ್ವ ಇಲ್ಲಿ ನಿಚ್ಚಳವಾಗಿ ಮೂಡಿದೆ· ರ ಅಭಿವ್ಯಕ್ತಿಯಲ್ಲಿ ಸ್ವಭಾವೋಕ್ತಿಯ ಸಹಜತೆ, ನೇರತೆಗಳಿವೆ."

— ಪ್ರಿ. ವಿ. ಕೃ ಗೋಕಾಕ

## ಮಾಯಾಮಂದಿರ

**ೀ ಭುಜೇಂದ್ರ ಮಹಿಷವಾಡಿ ಇವರ ಉತ್ತಮ ಕವನ ಸಂಗ್ರಹ**

"ಈ ಸಂಗ್ರಹವು ಭುಜೇಂದ್ರರ ಲೌಕಿಕ ದೃಷ್ಟಿಗೆ ಸಾಕ್ಷಿಯಾಗಿದೆ. ಜೇಂದ್ರರ ಕವಿತಾಶಕ್ತಿ ಸಹಜವಾದುದು, ಅಜೇಯವಾದುದು."

ರಂ. ಶ್ರೀ. ಮುಗಳಿ

## ವಿಜಯಶ್ರೀ

**ಶ್ರೀ ಮಿರ್ಜಿ ಅಣ್ಣಾರಾಯರ ಸಣ್ಣ ಕತೆಗಳ ಸಂಗ್ರಹ**

ಸ್ವಾತಂತ್ರ್ಯಸಂಗ್ರಾಮ, ಬಡತನದ ಬಾಳುವೆಗಳನ್ನು ಹೃದಯಂಗಮ ಾಗಿ ಇಲ್ಲಿ ಚಿತ್ರಿಸಲಾಗಿದೆ.

## ಶಾಂತಿಸೇವಾಸದನ, ಸೇಡಬಾಳ